

ಕಾಯಕವೇ ಕೈಲಾಸ

# ಸಿದ್ಧಗಂಗಾ



ಸಂಪುಟ : ೫೮ ಡಿಸೆಂಬರ್ ೨೦೨೨ ಸಂಚಿಕೆ : ೧೨



ಡಿಸೆಂಬರ್ ೬ ರಂದು, ಸಿದ್ಧಗಂಗಾ ವೈದ್ಯಕೀಯ ಮಹಾವಿದ್ಯಾಲಯ ಹಾಗೂ ಸಂಶೋಧನಾ ಕೇಂದ್ರದ ಪ್ರಥಮ ವರ್ಷದ ಎಂ.ಬಿ.ಬಿ.ಎಸ್. ತರಗತಿಗಳ ಪ್ರಾರಂಭಕ್ಕೆ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಚಾಲನೆ ನೀಡಲಾಯಿತು. ಈ ಸಂದರ್ಭದಲ್ಲಿ ರಾಜೀವ್ ಗಾಂಧಿ ವೈದ್ಯಕೀಯ ವಿಶ್ವವಿದ್ಯಾಲಯದ ಕುಲಪತಿ ಡಾ. ಎಂ.ಕೆ. ರಮೇಶ್, ಜಯದೇವ ಹೃದ್ರೋಗ ಆಸ್ಪತ್ರೆಯ ನಿರ್ದೇಶಕರಾದ ಡಾ. ಸಿ.ಎನ್. ಮಂಜುನಾಥ್, ಮಾಜಿ ಕುಲಪತಿ ಡಾ. ಎಸ್. ಸಚ್ಚಿದಾನಂದ, ಶ್ರೀ ಟಿ.ಕೆ. ನಂಜುಂಡಪ್ಪ, ಡಾ. ಎಂ.ಆರ್. ಹುಲಿನಾಯ್ಕರ್, ಡಾ. ಎಸ್. ಪರಮೇಶ್, ಡಾ. ಎಂ. ಶಾಲಿನಿ, ಶ್ರೀ ಟಿ.ಎಂ. ಸ್ವಾಮಿ, ಮೊದಲಾದ ಗಣ್ಯರು ಉಪಸ್ಥಿತರಿದ್ದರು.



ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಮುಖ್ಯಮಂತ್ರಿ ಶ್ರೀ ಬಸವರಾಜ ಬೊಮ್ಮಾಯಿಯವರು ತುಮಕೂರಿನ ಶೆಟ್ಟಿಹಳ್ಳಿಯಲ್ಲಿ ನಾರಾಯಣ ನೇತ್ರಾಲಯ ಉಚಿತ ಚಿಕಿತ್ಸಾ ಕೇಂದ್ರವನ್ನು ಲೋಕಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ಸಚಿವರಾದ ಶ್ರೀ ಬಿ.ಸಿ. ನಾಗೇಶ್, ಶ್ರೀ ಗೋವಿಂದ ಕಾರಜೋಳ, ನಾರಾಯಣ ನೇತ್ರಾಲಯ ಆಸ್ಪತ್ರೆಯ ಹಿರಿಯ ವೈದ್ಯರಾದ ಡಾ. ಭುಜಂಗಶೆಟ್ಟಿ ಮೊದಲಾದ ಗಣ್ಯರು ಉಪಸ್ಥಿತರಿದ್ದರು




ಶ್ರೀಮಠದಲ್ಲಿ ಏರ್ಪಡಿಸಿದ್ದ 'ಗುರುಕಿರಣ' ಕೇಂದ್ರದ ೫ನೇ ವಾರ್ಷಿಕೋತ್ಸವವನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಶ್ರೀ ಟಿ.ಕೆ. ನಂಜುಂಡಪ್ಪ, ಶ್ರೀ ವೆಂಕಟೇಶ ನಾಯಕ್, ಶ್ರೀ ಹೆಚ್. ರಾಜ್‌ಕುಮಾರ್, ಶ್ರೀ ನರಸಿಂಹಮೂರ್ತಿ, ಶ್ರೀ ಬಸವರಾಜು ಮೊದಲಾದವರು ಉಪಸ್ಥಿತರಿದ್ದರು.




ಅಂತರಂಗ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥
ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೫೮ ಡಿಸೆಂಬರ್ ೨೦೨೨ ಸಂಚಿಕೆ : ೧೨


ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಂಸ್ಥಾಪಕ ಅಧ್ಯಕ್ಷರು

ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ಅಧ್ಯಕ್ಷರು

ಪ್ರಧಾನ ಸಂಪಾದಕರು :
ಹೆಚ್.ವಿ. ವೀರಭದ್ರಯ್ಯ

ಸಂಪಾದಕರು :
ಎಚ್.ಎಸ್. ಸಿದ್ಧಗಂಗಪ್ಪ

ಪ್ರಕಾಶಕರು :
ಕೆ.ಬಿ. ಶಿವಶಂಕರಯ್ಯ

ಪತ್ರಿಕಾ ನಿರ್ವಹಣಾ ಸಮಿತಿ :
ಎಂ. ರೇಣುಕಾರಾಧ್ಯ
ವಿ. ಸೋಮಶೇಖರಯ್ಯ
ಎನ್.ವಿ. ಸತೀಶ್‌ಕುಮಾರ್

ಪ್ರಕಾಶನ :
ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪.

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್
ಬಿ-೭೧, ಕೆ.ಎಸ್.ಎಸ್.ಐ.ಡಿ.ಸಿ. ಕೈಗಾರಿಕನಗರ
ರಾಜಾಜಿನಗರ, ಬೆಂಗಳೂರು-೫೬೦ ೦೧೦

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572 104
ದೂ: 0816-2282322.
ಮೊ : 91410 36345


ಒಳಪುಟಗಳಲ್ಲಿ ...................




ಚಂದಾ ವಿವರ: ಆಜೀವ ಸದಸ್ಯತ್ವ ರೂ. 1500/- ವಾರ್ಷಿಕ ಚಂದಾ ರೂ. 250.00 ಬಿಡಿ ಪ್ರತಿ ರೂ. 20.00


email: siddaganganews@gmail.com





# ಪ್ರಧಾನ ಸಂಪಾದಕರ ನುಡಿ........

ಕಳೆದ ೬೮ ವರ್ಷಗಳಿಂದ ಶ್ರೀಮಠದ ದೈನಂದಿನ ಸೇವಾ ಚಟುವಟಿಕೆಗಳಲ್ಲಿ ಸೇವಾಭಾವನೆಯಿಂದ ಅಮೂಲ್ಯ ಸೇವೆ ಸಲ್ಲಿಸುತ್ತಾ ಬಂದಿರುವ ಶ್ರೀ ಸಿದ್ಧಗಂಗಾ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘ, ಕರ್ನಾಟಕದಲ್ಲಿಯೇ ಅತ್ಯಧಿಕ ಸಂಖ್ಯೆ ಸದಸ್ಯರನ್ನೊಳಗೊಂಡ ಸಂಘ ಎಂಬ ಹೆಗ್ಗಳಿಕೆಗೆ ಪಾತ್ರವಾಗಿರುವುದು ಅಭಿಮಾನದ ಸಂಗತಿ. ನಡೆದಾಡುವ ದೇವರು, ನಮ್ಮೆಲ್ಲರ ಆರಾಧ್ಯದೈವ, ತ್ರಿವಿಧದಾಸೋಹಿ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಶಿವಹಸ್ತದಿಂದ ಅಕ್ಟೋಬರ್ ೪, ೧೯೫೪ ರಂದು ಲೋಕಾರ್ಪಣೆಯಾದ ಸಂಘ, ಪರಮಪೂಜ್ಯ ಶ್ರೀಗಳವರ ದಿವ್ಯಾಶೀರ್ವಾದ, ಮಾರ್ಗದರ್ಶನದಿಂದ ಶ್ರೀಮಠದ ಸಮಾಜಮುಖಿ ಚಟುವಟಿಕೆಗಳಲ್ಲಿ ತನ್ನನ್ನು ಅರ್ಪಣಾ ಭಾವದಿಂದ ಸೇವೆ ಸಲ್ಲಿಸುತ್ತಾ ಬರುತ್ತಿದೆ.

ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘ ವರ್ಷದಿಂದ ವರ್ಷಕ್ಕೆ ಹಲವಾರು ಪ್ರಗತಿಪರ ಯೋಜನೆಗಳನ್ನು ಹಮ್ಮಿಕೊಂಡು ಯಶಸ್ವಿಯಾಗಿ ಅನುಷ್ಠಾನಗೊಳಿಸುತ್ತಾ ಬಂದಿದೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ : ಶ್ರೀ ಸಿದ್ಧಲಿಂಗೇಶ್ವರ ಜಾತ್ರೆಯ ಸಂದರ್ಭದಲ್ಲಿ ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನವನ್ನು ವ್ಯವಸ್ಥೆಗೊಳಿಸುವುದು, 'ಸಿದ್ಧಗಂಗಾ' ಮಾಸಪತ್ರಿಕೆಯನ್ನು ಪ್ರಕಟಿಸುವುದು, ಶ್ರೀ ಸಿದ್ಧಗಂಗಾ ಮಠದ ನೀರು ಸರಬರಾಜು ಮತ್ತು ಒಳಚರಂಡಿ ಸಮಗ್ರ ಯೋಜನೆಯನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಲು ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್ ಮೂಲಕ ನಿರ್ವಹಣೆ ಮಾಡುತ್ತಾ ಬರುತ್ತಿದೆ.

ಇವುಗಳ ಜೊತೆಗೆ ಪರಮಪೂಜ್ಯ ಶ್ರೀಗಳವರ ಪೀಠಾರೋಹಣದ ರಜತ ಮಹೋತ್ಸವ, ಸುವರ್ಣ ಮಹೋತ್ಸವ ಸಂದರ್ಭದಲ್ಲಿ ಪ್ರಕಟಿಸಿದ 'ಸಿದ್ಧಗಂಗಾಶ್ರೀ', ವಜ್ರಮಹೋತ್ಸವ, ಅಮೃತ ಮಹೋತ್ಸವ ಹಾಗೂ ಶತಮಾನೋತ್ಸವ ಸಂದರ್ಭದಲ್ಲಿ ಪ್ರಕಟಿಸಿದ 'ದಾಸೋಹಸಿರಿ', 'ಸ್ಮರಣ ಸಂಪುಟಗಳು' ಹಾಗೂ 'ಸಿದ್ಧಶೈಲ' ನೂರ ಹನ್ನೊಂದು ಕೃತಿಗಳು, 'ಅನುಭಾವಪಥ' ಗ್ರಂಥ ಸಂಘದ ಹೆಮ್ಮೆಯ ಚಿರಂತನ ಸೇವಾ ದಾಖಲೆಗಳಾಗಿವೆ.

ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಸಂಘದ ವಾರ್ಷಿಕ ಮಹಾಧಿವೇಶನದಲ್ಲಿ ದಯಪಾಲಿಸುತ್ತಿದ್ದ ಶಿವನುಡಿಗಳಲ್ಲಿ "ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘ ಶ್ರೀಮಠದ ಆಸ್ತಿ" ಎಂಬ ಮಾತುಗಳು ಸಂಘದ ಮೇಲಿಟ್ಟ ಪ್ರೀತಿ, ನಂಬಿಕೆಗೆ ಅನುಗುಣವಾಗಿ ಸಂಘ ನಡೆದುಕೊಂಡು ಬರುತ್ತಿದೆ.

ಕಳೆದೆರೆಡು ವರ್ಷಗಳಿಂದ ಕರೋನದಿಂದ ಸ್ಥಗಿತಗೊಂಡಿದ್ದ ಸರ್ವಸದಸ್ಯರ ವಾರ್ಷಿಕ ಮಹಾಧಿವೇಶನ ಈ ವರ್ಷ ಇದೇ ಡಿಸೆಂಬರ್ ೧೮ ರಂದು ನಡೆಸಲಾಗುತ್ತಿದೆ. ಈ ಸಂದರ್ಭದಲ್ಲಿ ಸಂಘದ ವತಿಯಿಂದ ಕೊಡಮಾಡುವ ಪ್ರತಿಷ್ಠಿತ ಪ್ರಶಸ್ತಿಗಳಾದ 'ಸಿದ್ಧಗಂಗಾಶ್ರೀ', 'ಸಿದ್ಧಗಂಗಾ ಶಿವಕುಮಾರಶ್ರೀ', 'ಸಂಘಸಿರಿ' ಹಾಗೂ 'ಕಾಯಕಯೋಗಿ' ಪ್ರಶಸ್ತಿಗಳನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ಶಿವಹಸ್ತದಿಂದ ಪ್ರದಾನ ಮಾಡಲಾಗುತ್ತದೆ. 'ಸಿದ್ಧಗಂಗಾಶ್ರೀ' ಪ್ರಶಸ್ತಿಗೆ ಭಾಜನರಾಗಿರುವ ಪೂಜ್ಯ ಶ್ರೀ ಶ್ರೀ · ಪ್ರಭುಚನ್ನಬಸವ ಸ್ವಾಮಿಗಳು ಹಾಗೂ ಡಾ. ಸಿ.ಎನ್. ಮಂಜುನಾಥ್, 'ಸಿದ್ಧಗಂಗಾ ಶಿವಕುಮಾರಶ್ರೀ' ಪ್ರಶಸ್ತಿಗೆ ಭಾಜನರಾಗಿರುವ ಪ್ರೊ. ಮಲೆಯೂರು ಗುರುಸ್ವಾಮಿ, ಡಾ. ಭೀಮಾಶಂಕರ ಚಂದ್ರಶೇಖರ ಬಿಲಗುಂದಿ, ಶ್ರೀಮತಿ ಕವಿತಾ ಮಿಶ್ರ ಹಾಗೂ ಡಾ. ವೈ.ಸಿ. ಕಮಲ, 'ಸಂಘಸಿರಿ' ಪ್ರಶಸ್ತಿಗೆ ಭಾಜರಾಗಿರುವ ಶ್ರೀ ಆರ್. ಲಕ್ಷ್ಮಯ್ಯ, ಶ್ರೀ ಚನ್ನನಗೌಡ, ಶ್ರೀ ಹೆಚ್.ಜಿ. ಈಶ್ವರಯ್ಯ, ಶ್ರೀ ಮಹೇಶ್‌ಶಾಸ್ತ್ರಿ, ಶ್ರೀ ತುಲಸಿರಾಮಯ್ಯ, ಶ್ರೀ ದೇವೇಂದ್ರ ಕಾರಂಜಿ ಹಾಗೂ ಶ್ರೀ ಆರ್.ಎಸ್. ಹುಚ್ಚಾಚಾರಿ, 'ಕಾಯಕಯೋಗಿ' ಪ್ರಶಸ್ತಿಗೆ ಭಾಜನರಾಗಿರುವ ಶ್ರೀ ರಂಜಾನ್‌ದರ್ಗಾ ಅವರನ್ನು 'ಸಿದ್ಧಗಂಗಾ' ಹೃತ್ಪೂರ್ವಕವಾಗಿ ಅಭಿನಂದಿಸುತ್ತದೆ.

ಆಧ್ಯಾತ್ಮದ ಮೇರುಶಿಖರ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯಾಶೀರ್ವಾದ, ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ಮಾರ್ಗದರ್ಶನ, ಸಂಘದ ಪ್ರಧಾನ ಕಾರ್ಯದರ್ಶಿಗಳಾದ ಡಾ. ಎಂ.ಎನ್. ಚನ್ನಬಸಪ್ಪ, ಕಾರ್ಯದರ್ಶಿಗಳಾದ ಶ್ರೀ ಕೆ.ಎಚ್. ಶಿವರುದ್ರಯ್ಯ ಹಾಗೂ ಸಂಘದ ಕಾರ್ಯಕಾರಿ ಸಮಿತಿ ಸದಸ್ಯರ ಸಲಹೆ, ಪ್ರೋತ್ಸಾಹ, ಸಕ್ರಿಯವಾಗಿ ಭಾಗವಹಿಸುವಿಕೆಯಿಂದ ಸಂಘ ಸಾಧನೆಯ ಹೆಜ್ಜೆಗುರುತುಗಳನ್ನು ಮೂಡಿಸುತ್ತಾ ಬರುತ್ತಿದೆ. ಸಂಘದ ಅಭಿವೃದ್ಧಿಗೆ ಕಾರಣರಾದ ಎಲ್ಲರನ್ನು 'ಸಿದ್ಧಗಂಗಾ' ಈ ಸಂದರ್ಭದಲ್ಲಿ ಅಭಿನಂದಿಸುತ್ತದೆ.

ಪ್ರೊ. ಹೆಚ್.ವಿ. ವೀರಭದ್ರಯ್ಯ





# ಶ್ರೀವಾಣಿ



## ಮನಸ್ಸು ಕೊಳಕಾದಾಗ

ಒಮ್ಮೆ ಒಬ್ಬ ಮಹಾರಾಜ ಕುದುರೆಯೇರಿ ರಾಜ್ಯವನ್ನು ಸುತ್ತಾಡುವುದಕ್ಕಾಗಿ ಹೊರಟ. ಮಧ್ಯಾಹ್ನವಾಯಿತು. ವಿಪರೀತ ಬಿಸಿಲು, ದಾರಿಮಧ್ಯೆ ಒಂದು ತಂಪಾದ ತೋಟ ಸಿಕ್ಕಿತು. ವಿಶ್ರಮಿಸಲು ಅಲ್ಲಿಳಿದ. ಆ ತೋಟದ ಮಾಲೀಕನೂ ಅಲ್ಲಿಯೇ ಇದ್ದ. ಪ್ರಭುಗಳನ್ನು ಕಂಡಕೂಡಲೇ ಭಕ್ತಿಯಿಂದ ತೋಟದೊಳಗೆ ಕರೆದೊಯ್ದು ಪಕ್ವವಾಗಿ ಹಣ್ಣಾಗಿರುವ ಒಂದು ದಾಳಿಂಬೆ ಹಣ್ಣನ್ನು ಕಿತ್ತು ತಂದ. ಒಂದು ಲೋಟ ತೆಗೆದುಕೊಂಡು ರಸವನ್ನು ಹಿಂಡಿದ. ಲೋಟ ತುಂಬಿತು. ಕುಡಿಯಲು ರಾಜನಿಗೆ ಕೊಟ್ಟ. ಮಹಾರಾಜ ಪಾನ ಮಾಡಿದ. ಬಹಳ ಸ್ವಾದವಾಗಿತ್ತು. ಅವನ ಹಸಿವು ಬಾಯಾರಿಕೆಗಳೆಲ್ಲಾ ಪರಿಹಾರವಾದವು. ಆದರೆ ಮನಸ್ಸು ಕೊಂಚ ವಿಕಾರವಾಯಿತು. ಮನಸ್ಸಿನಲ್ಲಿ ಕೆಟ್ಟ ಆಲೋಚನೆ ಬಂತು. ಆಮೇಲೆ ಮಧುರವಾದ ರಸವನ್ನು ಇನ್ನೂ ಒಂದು ಲೋಟ ಕುಡಿಯಬೇಕೆಂದು ಆಸೆ ಆಯ್ತು ಕೇಳಿದ. ಸಂತೋಷದಿಂದ ಮಾಲೀಕ ತಂದುಕೊಟ್ಟ. ರಾಜ ಕುಡಿದ. ಆದರೆ ಮೊದಲು ಕುಡಿದಷ್ಟು ಮಧುರವಾಗಿರಲಿಲ್ಲ. ಕಹಿಯಾಗಿತ್ತು, ರಾಜ ಪ್ರಶ್ನೆ ಮಾಡಿದ 'ಏನಯ್ಯ! ಆ ಹಣ್ಣು ಅದೇ ಮರದ್ದೋ? ಬೇರೆ ಮರದ್ದೋ? ರೈತ ಉತ್ತರ ಕೊಟ್ಟ. ಸ್ವಾಮಿ ಅದೇ ಮರದ್ದು; ಅದೇ ಕೊಂಬೆಯದು. ರಾಜನಿಗೆ ಆಶ್ಚರ್ಯವಾಯ್ತು. ಅದು ಸಮಸ್ಯೆಯೂ ಆಯಿತು. ಊರಿಗೆ ತೆರಳಿದ. ಮರುದಿವಸ ಎಲ್ಲಾ ವಿದ್ವಾಂಸರನ್ನು ಕರೆಸಿದ. ತನ್ನ ಸಮಸ್ಯೆಯನ್ನು ಅವರ ಮುಂದಿಟ್ಟ. ಒಂದೇ ಮರದ ಹಣ್ಣಿನರಸ ಮೊದಲು ಕುಡಿದಾಗ ಮಧುರವಾಗಿರಲು, ಇನ್ನೊಂದು ಬಾರಿ ಕುಡಿದಾಗ ಕಹಿಯಾಗಲು ಕಾರಣವೇನು? ವಿದ್ವಾಂಸರೆಲ್ಲರೂ ಆಲೋಚನಾಮಗ್ನರಾದರು. ಅದರಲ್ಲಿ ಬುದ್ಧಿವಂತನಾದ ವಿದ್ವಾಂಸನೊಬ್ಬನು ಕೇಳಿದ – ಸ್ವಾಮಿ, ಎರಡನೇ ಬಾರಿ ನೀವು ಕುಡಿಯುವಾಗ ಮನಸ್ಸಿನಲ್ಲಿ ಏನಾದರೂ ಆಲೋಚನೆ ಮಾಡಿದಿರಾ? ರಾಜ ಹೇಳಿದ –'ಹೌದು'. ತೋಟ ಬಹಳ ಫಲವತ್ತಾಗಿದೆ. ಮಾಲೀಕನಿಗೆ ಅದರಿಂದ ವರಮಾನ ಜಾಸ್ತಿ ಬರುತ್ತದೆ. ಆದ್ದರಿಂದ ಕಂದಾಯ ಹೆಚ್ಚು ಮಾಡಬೇಕು ಎಂದು ಮನಸ್ಸಿನಲ್ಲಿ ಅಂದುಕೊಂಡೆ. ಆಗ ಹಾಗಾದರೆ ಸ್ವಾಮಿ, ನಿಮ್ಮ ಸಮಸ್ಯೆಗೆ ಇಲ್ಲೇ ಇದೆ ಪರಿಹಾರ. ನೀವು ಮನಸ್ಸಿನಲ್ಲಿ ಕೆಟ್ಟದ್ದನ್ನು ಆಲೋಚನೆ ಮಾಡಿದಿರಿ. ಅದರಿಂದ ನಿಮ್ಮ ಮನಸ್ಸು ಕೊಳಕಾಯಿತು. ಆದ್ದರಿಂದಲೇನೆ ಎರಡನೇ ಬಾರಿ ಕುಡಿದ ರಸ ಕಹಿಯಾಯಿತು. ಎಂದು ಪಂಡಿತ ಹೇಳಿದ.

## ಯದ್ಭಾವಂ ತದ್ಭವತಿ

ಒಮ್ಮೆ ಒಬ್ಬ ಪ್ರಯಾಣಿಕ ದಾರಿಯಲ್ಲಿ ಹೋಗುತ್ತಾ ಇದ್ದ. ಬಿಸಿಲು ಜಾಸ್ತಿಯಿತ್ತು. ಒಂದು ಮರದ ನೆರಳಿನಲ್ಲಿ ಕುಳಿತುಕೊಂಡ. ಅದರ ನೆರಳು ಬಹಳ ತಂಪಾಗಿತ್ತು. ಮನಸ್ಸಿಗೆ ಬಹಳ ಅಪ್ಯಾಯಮಾನವಾಯ್ತು. ಕಣ್ಣೆತ್ತಿ ಮೇಲೆ ನೋಡಿದ, ಮರದ ಮೇಲೆ ಒಂದು ಹಣ್ಣು ಕಾಣಿಸಿತು. ಆತನಿಗೆ ಅದನ್ನು ತಿನ್ನಬೇಕೆಂಬ ಮನಸ್ಸಾಯಿತು. ಕೂಡಲೇ ಆ ಹಣ್ಣು ಬಿತ್ತು, ಅದನ್ನು ತಿಂದ, ಬಹಳ ಸ್ವಾದವಾಗಿತ್ತು. ಮತ್ತೊಂದು ಬೇಕು ಎನಿಸಿತು. ಅವನು ಮನಸ್ಸಿನಲ್ಲಿ ಅಂದುಕೊಂಡಂತೆ ಮತ್ತೊಂದು ಹಣ್ಣು ಆ ಮರದ ಮೇಲೆ ಕಂಡಿತು. ಅದನ್ನೂ ತಿಂದ, ಹಸಿವನ್ನು ಹಿಂಗಿಸಿಕೊಂಡ. ಆಮೇಲೆ ಅವನಿಗೆ ಬಾಯಾರಿತು ಕುಡಿಯಲು ನೀರು ಬೇಕೆನಿಸಿತು. ಅವನ ಮನಸ್ಸಿನಂತೆ ಸ್ವಚ್ಛವಾದ ಶುಭ್ರವಾದ ಕೊಳವೂ ಕಾಣಿಸಿತು. ನೀರನ್ನು ಕುಡಿದ, ಬಾಯಾರಿಕೆ ಹೋಯಿತು. ಇಷ್ಟೆಲ್ಲಾ ಬಯಸಿದ್ದು ಸಿಕ್ಕಿದಮೇಲೆ ಆ ಮರ ಕಲ್ಪವೃಕ್ಷವೆಂಬುದು ಅವನಿಗೆ ಗೊತ್ತಾಯಿತು. ಸರಿ ಮನಸ್ಸಿನ ಆಸೆ ಹೆಚ್ಚಾಯಿತು. ನಾನು ವಾಸ ಮಾಡುವುದಕ್ಕೆ ಒಂದು ಭವ್ಯವಾದ ಅರಮನೆ ಬೇಕು ಎಂದುಕೊಂಡ. ಅವನ ಇಷ್ಟದಂತೆ ಒಂದು ಅರಮನೆಯೂ ಸಿದ್ಧವಾಯಿತು. ಅಷ್ಟಕ್ಕೆ ಅವನ ಆಸೆ ಕೊನೆಯಾಗಲಿಲ್ಲ. ಸೇವೆಗಾಗಿ ಆಳುಕಾಳುಗಳು ಬೇಕು ಎನಿಸಿತು ಅದೂ ಆಯಿತು. ಹೀಗೆ ಎಲ್ಲ ಅನುಕೂಲಗಳು ಒದಗಿದ ಮೇಲೆ ಏಕೋ ಅವನ ಮನಸಿಗೆ ವಿಕಾರವುಂಟಾಯಿತು. ಮನಸ್ಸಿನಲ್ಲಿ ಭೂತ ಬಂದರೆ...... ಅಂದುಕೊಂಡ. ಅದರಂತೆ ಭೂತವೂ ಬಂದು ಎಲ್ಲವನ್ನೂ ನುಂಗಿತು.

ವಚನ-ತ್ರಿವಿಧಿ

## ಶ್ರೀ ಸಿದ್ಧಲಿಂಗೇಶ್ವರ ವಚನ



ತತ್ವಾರ್ಥವ ಬಲ್ಲೆವೆಂಬೆರಯ್ಯಾ ತತ್ತಿಯೊಳಗಣ ಬಾಲಕರು !
ತತ್ವಾನುಭಾವ ಸಂಭವಿಸಿದಡೆ ಸತ್ತುಹೋಗಲುಂಟೇ?
ಸತ್ತುಹೋಗುವ ಪ್ರಾಣಿಗಳ ಶಿವತತ್ವಾನುಭಾವಿಗಳೆಂತೆಂಬೆನಯ್ಯಾ?
ಅನುಪಮ ಅದ್ವಯರೆಂತೆಂಬೆನಯ್ಯಾ?
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ ॥

ತತ್ವ-ತತ್ವಶಾಸ್ತ್ರದ, ಅರ್ಥ-ಅನ್ವಯವದು, ಬಲ್ಲೆವೆಂಬರಯ್ಯಾ-ಅರಿದು ಬಲ್ಲೆವೆಂದು ಹೇಳುವರಯ್ಯಾ, ತತ್ತಿಯೊಳಗಣ - ಮಟ್ಟೆಯೊಳಗಣ, ಬಾಲಕರು - ಶಿಶುಗಳು; ತತ್ವಾನುಭಾವ - ಶಿವಾನುಭಾವವು, ಸಂಭವಿಸ್ದರೆ - ದೊರಕಿಕೊಂಡರೆ, ಸತ್ತುಹೋಗಲುಂಟೆ, ಮೃತವಾಗಿ ಹೋಗಲುಂಟೆ, ಸತ್ತುಹೋಗುವ-ಮೃತವಾಗಿ ಹೋಗುವ, ಪ್ರಾಣಿಗಳ- ಜೀವರುಗಳ, ಶಿವತತ್ವಾನುಭಾವಿಗಳೆಂತೆಂಬೆನಯ್ಯಾ ;ಶಿವತತ್ವ-ಮಹಾಲಿಂಗ ತತ್ವದಲ್ಲಿ, ಅನುಭಾವಿಗಳೆಂತೆಂಬೆನಯ್ಯಾ- ಶಿವಾನುಭಾವಿಗಳೆಂದು ಹ್ಯಾಂಗೆ ಹೇಳುವೆನಯ್ಯಾ, ಅನುಪಮ-ಉಪಮಿಸಬಾರದ, ಅದ್ವಯ-ಎರಡಿಲ್ಲದೆ ಲಿಂಗದಲ್ಲಿ ಕೂಡಲ್ಪಟ್ಟವರುಗಳೆಂದು ಹ್ಯಾಂಗೆ ಹೇಳುವೆನಯ್ಯಾ ಮಹಾಲಿಂಗಗುರು ಶಿವಸಿದ್ಧೇಶ್ವರಪ್ರಭುವೆ.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು- ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ (ರಿ.) ಎಡೆಯೂರು-ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ತನುವ ಬಳಲಿಸೆಂದೆ ಮನವಕಂದಿಸೆಂದೆ
ಧನವ ಜಂಗಮಕೆ ನೀಡೆಂದೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹೂವಾಗಿ ಅರಳಿರುವೆ ಸೊಡರಾಗಿ ಬೆಳಗಿರುವೆ
ಪುಣ್ಯನದಿಯಾಗಿ ಹರಿದಿರುವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಗ್ಗೆಯ ಮಾಯಿದೇವ ಮೈಲಾರ ಶರಣರ
ಹಿಗ್ಗಿನಿಂದಲಿ ನಿರುತ ಸ್ಮರಿಸುವ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮೂರುಸಾವಿರಮಠದ ಗುರುಸಿದ್ಧತಂದೆಗಳ
ಸಿದ್ಧಾರೂಢಮಠದಯತಿಗಳ । ಸ್ಮರಿಸುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆದ್ಯರ ಪ್ರಮಥರ ಅನುಭಾವಿ ಪುಣ್ಯರ
ಲೋಕಕಾರುಣ್ಯರ ಶರಣರ । ಸ್ಮರಿಸುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಚಾರನಿಷ್ಠರ ಸುವಿಚಾರಶೀಲರ
ಕಾಯಕಯೋಗಿಗಳ ಸ್ಮರಿಸುವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀಲಮ್ಮ ಲಕ್ಕಮ್ಮ ಕದಿರೆಯ ರೆಮ್ಮವ್ವೆ
ವರದಾನಿ ಗುಡ್ಡವ್ವೆಯ ಸ್ಮರಿಸುವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹರನ ಚರಣಕ್ಕಿಂತ ಗುರುಚರಣವೆ ಮೇಲು
ವರಜಂಗಮದ ಚರಣ ಬಹುಮೇಲು । ತಿಳಿಯೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲಿಂಗದೇವನ ಕಂಡು ಕಂಗಳು ತುಂಬಿದವು
ಜಂಗಮವ ಕಂಡು ಮನತುಂಬಿ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅನುಭಾವಿಗಳ ಸಂಗ ಹಾಲು ಜೇನುಂಡಂತೆ
ಮನದೊಳಗೆ ಮಲ್ಲಿಗೆ ಬಿರಿದಂತೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪ್ರೊ. ಹೆಚ್.ವಿ. ವೀರಭದ್ರಯ್ಯ



ವರದಿ

# ಸಿದ್ಧಗಂಗಾ ವೈದ್ಯಕೀಯ ಕಾಲೇಜು ಹಾಗೂ ಸಂಶೋಧನ ಕೇಂದ್ರದ ಪ್ರಥಮ ಎಂಬಿಬಿಎಸ್ ತರಗತಿಗಳಿಗೆ ಚಾಲನೆ

"ಸ್ವಾತಂತ್ರ್ಯಾ ನಂತರ ದೇಶದಲ್ಲಿ ತಾಂಡವವಾಡುತ್ತಿದ್ದ ಅನಕ್ಷರತೆ, ಬಡತನ, ಪೋಲಿಯೋ, ಪ್ಲೇಗ್ ನಂತಹ ಮಾರಕ ರೋಗಗಳು ದೇಶವನ್ನು ಕಾಡುತ್ತಿದ್ದಾಗ, ವಿದ್ಯೆ ಹಾಗೂ ಆರೋಗ್ಯ ಜನಸಮಾನ್ಯರಿಗೆ ತಲುಪಲು ಸರ್ಕಾರಕ್ಕಿಂತಲೂ ಮಠಗಳ ಕೊಡುಗೆ ಅಪಾರ" ಎಂದು ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿವಿ ಕುಲಪತಿ ಡಾ.ಎಂ.ಕೆ.ರಮೇಶ್ ಅಭಿಪ್ರಾಯಪಟ್ಟರು.

ಅವರು ನಗರದ ಸಿದ್ಧಗಂಗಾ ಮೆಡಿಕಲ್ ಕಾಲೇಜು ಆವರಣದಲ್ಲಿ ಡಿಸೆಂಬರ್ ೬ ರಂದು ನಡೆದ ಸಿದ್ಧಗಂಗಾ ವೈದ್ಯಕೀಯ ಮಹಾವಿದ್ಯಾಲಯ ಹಾಗೂ ಸಂಶೋಧನಾ ಸಂಸ್ಥೆಯ ಪ್ರಥಮ ವರ್ಷದ ಎಂಬಿಬಿಎಸ್ ತರಗತಿಗಳಿಗೆ ಚಾಲನೆ ನೀಡಿ ಮಾತನಾಡಿ "ದೇಶದ ಅಭಿವೃದ್ಧಿಯಲ್ಲಿ ಪ್ರಾಥಮಿಕ ಹಾಗೂ ಪ್ರೌಢ ಹಂತದಲ್ಲಿ ಮಠಗಳು ಹಾಗೂ ಸರ್ಕಾರಿ ಶಾಲೆಗಳಿಂದ ದೊರೆತ ಶಿಕ್ಷಣ ಪ್ರಮುಖ ಪಾತ್ರವಹಿಸಿದೆ. ನಮ್ಮ ದೇಶದಲ್ಲಿ ವೈದ್ಯಕೀಯ ಶಿಕ್ಷಣ ಬೆಳೆದು ನಿಂತಿದೆ.ದೇಶದಲ್ಲಿ ೬೦೦ ಮೆಡಿಕಲ್ ಕಾಲೇಜುಗಳ ನಿರ್ಮಾಣದಿಂದ ಪ್ರತಿ ೮೩೪ ಜನರಿಗೆ ದೇಶದಲ್ಲಿ ಒಬ್ಬ ವೈದ್ಯನಿರುವುದು ಅಭಿವೃದ್ಧಿ ಹೊಂದುತ್ತಿರುವ ಭಾರತದ ಕೊಡುಗೆ. ವೈದ್ಯರು ನಗರ ಪ್ರದೇಶಗಳಿಗೆ ಸೀಮಿತವಾಗದೆ, ಗ್ರಾಮೀಣ ಭಾಗದಲ್ಲಿ ವೈದ್ಯರು ಕರ್ತವ್ಯ ನಿರ್ವಹಿಸಿ ಗ್ರಾಮಭಾರತವನ್ನು ಆರೋಗ್ಯ ಭಾರತವನ್ನಾಗಿ ಮಾಡಬೇಕು. ಶಿಕ್ಷಣ, ದಾಸೋಹ, ಆರೋಗ್ಯ ಸೇವೆಗೆ ಸಿದ್ಧಗಂಗಾ, ಆದಿಚುಂಚನಗಿರಿ, ಸಿರಿಗೆರೆ ಸೇರಿ ರಾಜ್ಯದ ಮಠಗಳು ಉತ್ತಮ ಉದಾಹರಣೆಯಾಗಿದೆ. ನಡೆದಾಡುವ ದೇವರೆನಿಸಿದ್ದ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಮಕ್ಕಳಿಗೆ ಪ್ರತಿವರ್ಷ ತಮ್ಮ ಶಿಕ್ಷಣ ಸಂಸ್ಥೆಯ ಮೂಲಕ ಶಿಕ್ಷಣ ಒದಗಿಸುವ ವ್ಯವಸ್ಥೆ ರೂಪಿಸಿದರು. ಮೆಡಿಕಲ್ ಕಾಲೇಜು ನಡೆಸುವುದು ಸುಲಭವಲ್ಲ. ೪೦೦-೫೦೦ ಕೋಟಿ





ಸಿದ್ಧಗಂಗಾ ವೈದ್ಯಕೀಯ ಕಾಲೇಜು ಅವರಣದಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಪುತ್ಥಳಿ ಅನಾವರಣ

ವೆಚ್ಚ ಮಾಡಬೇಕಾಗುತ್ತದೆ. ವಾಣಿಜ್ಯದ ಆಯಾಮಗಳು ಪ್ರವೇಶಿಸುತ್ತವೆ. ಇಂತಹ ಸಂದರ್ಭದಲ್ಲಿ ಸಿದ್ಧಗಂಗಾ ಮಠದವರು ಮಠದ ವ್ಯವಸ್ಥೆಗೂ ಧಕ್ಕೆಯಾಗದಂತೆ ಕಾಲೇಜ್‌ನ್ನು ನಡೆಸಿಕೊಂಡು ಹೋಗುವ ದೊಡ್ಡ ಜವಾಬ್ದಾರಿಯುನ್ನು ನಿರ್ವಹಿಸಬೇಕಿದೆ" ಎಂದು ಕರೆನೀಡಿದರು.



ಸಮಾರಂಭಕ್ಕೆ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ತಜ್ಞ ವೈದ್ಯರೊಂದಿಗೆ ಪರಮಪೂಜ್ಯ ಶ್ರೀ ಶ್ರೀಗಳವರಿಂದ ಸಮಾಲೋಚನೆ

ಜಯದೇವ ಹೃದ್ರೋಗ ಸಂಸ್ಥೆಯ ನಿರ್ದೇಶಕರಾದ ಡಾ. ಸಿ.ಎನ್.ಮಂಜುನಾಥ್ ಮಾತನಾಡಿ "ಹೃದಯಾಘಾತ, ಅಧಿಕ ರಕ್ತದೊತ್ತಡ, ಸಕ್ಕರೆ ಖಾಯಿಲೆ ನಂತಹ ಅನೇಕ ಖಾಯಿಲೆಗಳು ಜೀವನಶೈಲಿಯ ಬದಲಾವಣೆಯಿಂದ ಉಂಟಾಗುತ್ತಿದೆ. ದೇಶದ ಶೇ. ೬೦ರಷ್ಟು ಜನರು ಈ ಕಾರಣಗಳಿಗಾಗಿಯೇ ಸಾವನ್ನಪ್ಪುತ್ತಿರುವುದು ಆತಂಕಕಾರಿಯಾಗಿದೆ. ಶೇ. ೫೧ರಷ್ಟು ಜನ ಭಾರತದಲ್ಲಿ ಸೋಮಾರಿಗಳಾಗಿದ್ದಾರೆ ಎಂದು ಅಧ್ಯಯನ ಹೇಳುತ್ತಿದೆ. ನಮ್ಮ ದೇಶದಲ್ಲಿ ಗಣಕೀಕರಣದ ಜೊತೆ ಸೋಮಾರೀಕರಣ ಉಂಟಾಗುತ್ತಿರುವುದು ಕಳವಳಕಾರಿ. ವೈದಕೀಯ ವೃತ್ತಿಗೆ ಬರುವವರಲ್ಲಿ ಬದ್ಧತೆ, ತಾಳ್ಮೆ ಬಹುಮುಖ್ಯ. ನೀವು ಅಲೋಪತಿ, ಹೋಮಿಯೋಪತಿ, ನ್ಯಾಚುರೋಪತಿ ಹೀಗೆ ಯಾವುದೇ ವೈದ್ಯಕೀಯ ಪದ್ಧತಿ ಪ್ರಾಕ್ಟೀಸ್ ಮಾಡಿ, ಆದರೆ ಸೇವೆಯಲ್ಲಿ ಮಾನವೀಯತೆ ಬಹಳ ಮುಖ್ಯ. ಗ್ರಾಮೀಣ ಭಾಗದಲ್ಲಿ ವೈದ್ಯರು ಸೂಕ್ತ ಚಿಕಿತ್ಸೆ ನೀಡುವ ವಾತಾವರಣ ನಿರ್ಮಾಣವಾಗಬೇಕಿದೆ. ತಮ್ಮದಲ್ಲದ ತಪ್ಪಿಗೆ ವೈದ್ಯರನ್ನು ಹೊಣೆ ಮಾಡಲಾಗುತ್ತಿದೆ. ಅವರೂ ನಮ್ಮಂತೆ ಮನುಷ್ಯರು ಎಂದು ತಿಳಿಯಬೇಕು" ಎಂದು ಹೇಳಿದರು.

"ಗ್ರಾಮಭಾರತವನ್ನು ಕಟ್ಟುವ ನಿಟ್ಟಿನಲ್ಲಿ ಸಿದ್ಧಗಂಗಾ ಮಠ ಕರ್ತವ್ಯ ನಿರ್ವಹಿಸುತ್ತಿದೆ. ಸಿದ್ಧಗಂಗಾ ಮಠದ ದೈವಿಕ ಅಯಸ್ಕಾಂತೀಯ ಗುಣ ನಿಮ್ಮ ಬದುಕನ್ನು



ಉಜ್ವಲಗೊಳಿಸಲಿದೆ. ಯುವಕರು ಕನಸನ್ನು ಈಡೇರಿಸಿಕೊಳ್ಳಲು ನಿದ್ದೆಯಿಲ್ಲದ ದಿನಗಳನ್ನು ಕಳೆಯಬೇಕು. ಹೃದಯವಂತಿಕೆ, ತಾಳ್ಮೆ, ಕರುಣೆ, ದೂರದೃಷ್ಟಿ ಉಳ್ಳುವ ಯುವಜನತೆ ಹೊರಹೊಮ್ಮಬೇಕು" ಎಂದು ಕರೆ ನೀಡಿದರು.

ದಿವ್ಯ ಸಾನ್ನಿಧ್ಯವಹಿಸಿದ್ದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ತಮ್ಮ ಮಂಗಳನುಡಿಗಳಲ್ಲಿ "ಮಕ್ಕಳಿಗೆ ಆಶ್ರಯ ಹಾಗೂ ಗ್ರಾಮಾಂತರ ಮಕ್ಕಳಿಗೆ ಶಿಕ್ಷಣ ನೀಡಿವುದು ಶ್ರೀಗಳ ಕನಸಾಗಿತ್ತು. ಶಿಕ್ಷಣ ಹಾಗೂ ದಾಸೋಹದ ಆದೇಶ ನನಗೆ ನೀಡಿದ್ದರು. ಸಿದ್ಧಗಂಗಾ ಮೆಡಿಕಲ್ ಕಾಲೇಜು ನಿರ್ಮಾಣಕ್ಕೆ ಈ ಹಿಂದೆ ಎರಡು ಬಾರಿ ಶ್ರೀಗಳು ೧೯೭೦ ಹಾಗೂ ೧೯೮೪ ರಲ್ಲಿಯೇ ಅರ್ಜಿ ಸಲ್ಲಿಸಿದ್ದರೂ ಸರ್ಕಾರ ಅನುಮತಿ ಕೊಟ್ಟಿರಲಿಲ್ಲ. ಬಹುತೇಕ ಮೆಡಿಕಲ್ ಕಾಲೇಜು ಸ್ಥಾಪನೆ ಮಾಡುವುದು ನಮ್ಮಂತವರಿಗಲ್ಲ ಎಂದು ಸುಮ್ಮನಾಗಿದ್ದರು. ಆದರೆ ಸಂಸದ ಜಿ.ಎಸ್.ಬಸವರಾಜು ಹಾಗೂ ನಮ್ಮ ೯ ವೈದ್ಯರುಗಳ ಶ್ರಮದ ಪ್ರತಿಫಲವಾಗಿ









ನಿರ್ಮಾಣವಾದ ಸಿದ್ಧಗಂಗಾ ಆಸ್ಪತ್ರೆ ಈಗ ಮೆಡಿಕಲ್ ಕಾಲೇಜಾಗಿ ತಲೆ ಎತ್ತಿನಿಂತಿದೆ. ಪ್ರಥಮ ವರ್ಷಕ್ಕೆ ದಾಖಲಾತಿಗಾಗಿ ಆಗಮಿಸಿರುವ ಪ್ರತಿಯೊಬ್ಬ ವಿದ್ಯಾರ್ಥಿಗಳಿಗೆ ಶುಭವಾಗಲಿ.ವೈದ್ಯೋ ನಾರಾಯಣೋ ಹರಿಃ ಎಂದು ಕರೆಯುತ್ತಾರೆ ವೈದ್ಯರ ಸ್ಥಾನ ನೋಬೆಲ್ ಪ್ರೋಫೇಷನ್ ಆಗಿದೆ.ರೋಗಿಗಳಲ್ಲಿ ದೇವರನ್ನು ಕಾಣುವ ಮನೋಭಾವನೆ ಎಲ್ಲಾ ವೈದ್ಯರಲ್ಲಿ ಮೂಡಬೇಕು" ಎಂದು ಕರೆ ನೀಡಿದರು.

ರಾಜೀವ್‌ಗಾಂಧಿ ವೈದ್ಯಕೀಯ ಮಹಾವಿದ್ಯಾಲಯದ ನಿವೃತ್ತ ಕುಲಪತಿಗಳಾದ ಡಾ.ಎಸ್.ಸಚ್ಚಿದಾನಂದ್ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು. ಎಸ್‌ಐಟಿ ನಿರ್ದೇಶಕ ಡಾ. ಎಂ.ಎನ್. ಚನ್ನಬಸಪ್ಪ, ಸಿದ್ಧಗಂಗಾ ವಿದ್ಯಾಸಂಸ್ಥೆ ಕಾರ್ಯದರ್ಶಿ ಶ್ರೀ ಟಿ.ಕೆ.ನಂಜುಂಡಪ್ಪ, ಪ್ರಾಜೆಕ್ಟ್ ಕೋಆರ್ಡಿನೇಟರ್ ಶ್ರೀ ಟಿ.ಎಂ.ಸ್ವಾಮಿ, ಎಸ್‌ಐಟಿ ಸಿಇಓ ಶ್ರೀ ಶಿವಕುಮಾರಯ್ಯ, ಸಿದ್ಧಗಂಗಾ ವಿದ್ಯಾಸಂಸ್ಥೆ ಸದಸ್ಯ ಶ್ರೀ ಶಾಂತರಾಜು, ಶ್ರೀ ಕೋರಿ ಮಂಜುನಾಥ್, ಸಿದ್ಧಗಂಗಾ ಮೆಡಿಕಲ್ ಕಾಲೇಜಿನ ನಿರ್ದೇಶಕರಾದ ಡಾ.ಎಸ್.ಪರಮೇಶ್ ಹಾಗೂ ಪ್ರಾಂಶುಪಾಲರಾದ ಡಾ. ಎಂ. ಶಾಲಿನಿ, ಮೆಡಿಕಲ್ ಮೇಲ್ವಿಚಾರಕ ಡಾ.ನಿರಂಜನಮೂರ್ತಿ, ಶ್ರೀದೇವಿ ಸಂಸ್ಥೆಯ ಮುಖ್ಯಸ್ಥರಾದ ಮಾಜಿ ಎಂಎಲ್‌ಸಿ ಡಾ. ಎಂ.ಆರ್. ಹುಲಿನಾಯ್ಕರ್, ಮೇಯರ್ ಶ್ರೀಮತಿ ಪ್ರಭಾವತೀ ಸುಧೀಶ್ವರ್, ಪಾಲಿಕೆ ಆಯುಕ್ತ ಶ್ರೀ ಯೋಗಾನಂದ್, ಪಾಲಿಕೆ ಸದಸ್ಯೆ ಶ್ರೀಮತಿ ಮಂಜುಳಾ ಆದರ್ಶ್, ಸಿದ್ಧಗಂಗಾ ವಿದ್ಯಾಸಂಸ್ಥೆ ಹಾಗೂ ಆಡಳಿತ ಮಂಡಳಿಯ ಎಲ್ಲಾ ಹಿರಿಯ ಸದಸ್ಯರು ಸೇರಿದಂತೆ ಅನೇಕರು ಸಮಾರಂಭದಲ್ಲಿ ಉಪಸ್ಥಿತರಿದ್ದರು.







## ಅನುಭಾವದ ನುಡಿಗಳು

# ಯಶಸ್ವಿನ ಮೂರು ಮೂಲ ಸೂತ್ರಗಳು

– ಪೂಜ್ಯಶ್ರೀ ಸಿದ್ದೇಶ್ವರಸ್ವಾಮಿಗಳು *

ಬದುಕನ್ನು ಶ್ರೀಮಂತ ಮಾಡುವುದಕ್ಕೆ ಏನು ಬೇಕು? ಅದು ಮೂಲಪ್ರಶ್ನೆ. ಅದಕ್ಕೆ ಒಳ್ಳೆಯ ಎದೆ ಬೇಕು ಭಾವನೆಗಳು ಬೇಕು, ಅದು ನಿಜವಾದ ಶ್ರೀಮಂತಿಕೆ ಹಲವು ಬಗೆಯ ಸಂಪತ್ತುಗಳಿವೆ. ಭೌತಿಕ ಸಂಪತ್ತು ಇದೆ. ವಿದ್ಯಾಸಂಪತ್ತು, ಬುದ್ಧಿಸಂಪತ್ತು.... ಹಾಗೇ ಜನಸಂಪತ್ತು ಇದೆ. ಯಾವುದು ಮನುಷ್ಯನ ಬದುಕನ್ನು ಶ್ರೀಮಂತಗೊಳಿಸುತ್ತದೆ ಅದು ನಿಜವಾದ ಸಂಪತ್ತು. ಏನೆಲ್ಲಾ ಸಂಪತ್ತು ಇದ್ದು ಬದುಕಿನಲ್ಲಿ ಸಂತೋಷ ಇರದಿದ್ದರೆ ! ಏನು ಬಂತು ? ಬದುಕಿನ ಸಂಪತ್ತಿಗೆ ಬೆಲೆ ಕಟ್ಟಲು ಬರುವುದಿಲ್ಲ.

ಇಲ್ಲಿ ಒಂದಿಷ್ಟು ಹೂವುಗಳಿವೆ. ಪ್ಲಾಸ್ಟಿಕ್ ಹೂವುಗಳಿರಬಹುದು, ಎಷ್ಟು ಸುಂದರವಾಗಿವೆ, ಮುಟ್ಟುವುದಕ್ಕೆ ಹಿತ ಆಗುತ್ತದೆ. ಇದರ ಬೆಲೆ ಸಾವಿರ ರೂಪಾಯಿ ಇರಬಹುದು. ಆದರೆ ಅದು ನಿಜವಾದ ಬೆಲೆ ಅಲ್ಲ. ಅದು ಪ್ಲಾಸ್ಟಿಕ್, ಪ್ಲಾಸ್ಟಿಕ್‌ಗೆ ಬೆಲೆ ಅಲ್ಲ, ಹೂವಿಗೆ ಬೆಲೆ, ಅದರ ರೂಪಕ್ಕೆ ಬೆಲೆ. ಅದು ಅರಳಿದ್ದಲ್ಲ ಮಾಡಿದ್ದು, ಅದರ ಸುಂದರತೆಗೆ ಬೆಲೆ. ಒಳಗಿರುವ ಜೀವಂತಿಕೆಗೆ ಎಷ್ಟು ಬೆಲೆ ಕಟ್ಟೋದು? ಹೂವಿಗೆ ಬೆಲೆ ಕಟ್ಟಲು ಆಗುವುದಿಲ್ಲ. ಮಾರುಕಟ್ಟೆಯಲ್ಲಿ ಬೆಲೆ ಇರಬಹುದು. ಹೂವು ಹೇಳುತ್ತದೆ.... ಅದು ನಿನ್ನ ಭ್ರಮೆ. ನಾನು ಅರಳುವುದಕ್ಕೆ ಹತ್ತಾರು ವರ್ಷ ನಿಸರ್ಗ ಕಷ್ಟಪಟ್ಟಿದೆ. ಅದಕ್ಕೆ ಬೆಲೆ ಎಷ್ಟು? ವಸ್ತುವಿನ ಬೆಲೆ ಹೊರಗಿನಿಂದ ಬರುವುದಲ್ಲ. ಒಳಗಿನಿಂದ ಬರಬೇಕು. ಅದು ಬದುಕನ್ನು ಶ್ರೀಮಂತಗೊಳಿಸುತ್ತದೆ. ಬದುಕು ಸಂಪದ್ಭರಿತವಾಗಬೇಕಾದರೆ ಒಳಗಿನ ಸಂಪತ್ತು ಇರಬೇಕು. ಕೋಗಿಲೆ ಹಾಡುತ್ತದೆ, ಮಧುರವಾಗಿ ಹಾಡುತ್ತದೆ, ಅದರ ಕಂಠಕ್ಕೆ ಬೆಲೆ ಕಟ್ಟಲು ಆಗುತ್ತದೇನು?

ಮನುಷ್ಯನ ಮುಖದ ಮೇಲೆ ಒಂದಿಷ್ಟು ನಗು ಬರದಿದ್ದರೆ ಏನು ಪ್ರಯೋಜನ? ಅದು ಬಹಳ ಬೆಲೆ ಉಳ್ಳದ್ದು. ಜೀವನದಲ್ಲಿ ಏನೆಲ್ಲಾ ಪಡೆದುಕೊಂಡರೂ ಒಳಗೆ ಒಂದಿಷ್ಟು ಸಂತೋಷಪಡದಿದ್ದರೆ ಎಲ್ಲಾ ನಿರರ್ಥಕ.

'ತುಕಾರಾಮ' ಹೆಸರು ಕೇಳಿದ್ದೀರಿ. ಆತನಿಗೆ ಮನೆಯಲ್ಲಿ ಏನೂ ಇರಲಿಲ್ಲ. ತಿನ್ನಲಿಕ್ಕೂ ಇರಲಿಲ್ಲ. ಇವರ ಸ್ಥಿತಿಯನ್ನು ನೋಡಿ ಶಿವಾಜಿ ಮಹಾರಾಜರು ನೀನು ನನ್ನ ರಾಜ್ಯದಲ್ಲಿದ್ದೀಯಾ ಒಂದಿಷ್ಟು ಸಂಪತ್ತು ತೆಗೆದುಕೋ ಸುಖವಾಗಿರು.... ಎಂದು ಹೇಳಿ ಆಳುಗಳ ಮೂಲಕ ಸಂಪತ್ತು ಕಳುಹಿಸಿದರು. ತುಕಾರಾಮ ಅದೇ ಸೇವಕರ ಮೂಲಕ ಶಿವಾಜಿಗೆ ' – ತುಕಾರಾಮನಂತ ಶ್ರೀಮಂತ ಈ ಜಗತ್ತಿನಲ್ಲಿ ಬೇರೊಬ್ಬನಿಲ್ಲ' ಎಂದು ಹೇಳಿ ಕಳುಹಿಸುತ್ತಾನೆ.

I am the richer than the richest. ಈ ಜಗತ್ತಿನ ಶ್ರೀಮಂತರಿಗಿಂತ ಒಂದು ಗುಂಜು ಶ್ರೀಮಂತಿಕೆ ನನಗೆ ಜಾಸ್ತಿ ಇದೆ ಎಂದ. ಏನು ಭಾವನೆ ಅದು. ಹೊರಗಿನದು ಶ್ರೀಮಂತಿಕೆ ಅಲ್ಲ, ಒಳಗಿನದು ಶ್ರೀಮಂತಿಕೆ.

ಓದಿದರೆ ಜ್ಞಾನ ಸಿಗುತ್ತದೆ. ವ್ಯಾಯಾಮ ಮಾಡಿದರೆ ಶಕ್ತಿ ಬರುತ್ತದೆ. ಆದರೆ ನಗುವುದನ್ನು ಕಲಿಸುವುದು ಹೇಗೆ? ಅದು ಬರೀ ನಗುವುದಲ್ಲ. It is not a laugh, smile.... ಅದು ಹೃದಯ ಅರಳಿ ಹೊರಹೊಮ್ಮಿದಂತೆ. ನಾವು ನಗುತ್ತಿರುತ್ತೇವೆ, ವ್ಯಾಯಾಮ ಎಂದು ತಿಳಿದಿದ್ದೇವೆ. ಮಗು ನಗುತ್ತದೆ, ಅದು ಜೀವನ ಎಂದು ತಿಳಿದಿದೆ. ಹೃದಯದಲ್ಲಿ ಹರ್ಷ ತುಂಬಿದಾಗ ಮಾತಿನಲ್ಲಿ, ಕಣ್ಣುಗಳಲ್ಲಿ, ಮುಖದಲ್ಲಿ ನಗು ಅರಳುತ್ತದೆ. ಕಳೆದ ವಸ್ತು ಸಿಕ್ಕಾಗ ಎಷ್ಟು ಸಂತೋಷ ಆಗುತ್ತದೆ! ಈಗ ನಿಮ್ಮದೆ ಒಂದು ವಸ್ತು ಕಳೆದಿದೆ. ತುಂಬಾ ಬೆಲೆ ಬಾಳುವ ಉಂಗುರ ಕಳೆದರೆ ಎಷ್ಟು ಭಯ ಆಗುತ್ತದೆ. ಮುಖದ ಕಾಂತಿ ಹೊರಟು ಹೋಗುತ್ತದೆ, ಹೃದಯದಲ್ಲಿ ಶಾಂತಿ ಮರೆಯಾಗುತ್ತದೆ. ಸ್ವಲ್ಪ ಹೊತ್ತಿನಲ್ಲಿ ಆ ವಸ್ತು ಅಲ್ಲೇ ಸಿಕ್ಕರೆಷ್ಟು ಆನಂದ ಆಗುತ್ತದೆ. ಶರೀರದಲ್ಲಿ, ಮುಖದಲ್ಲಿ ಬದಲಾವಣೆ ಆಗುತ್ತದೆ. ಅದು ಕಲಿತದ್ದಲ್ಲ... ತಾನಾಗೇ ಬಂದದ್ದು, ಅದು ಮನುಷ್ಯನಿಗೆ ನಿಸರ್ಗ ಕೊಟ್ಟ ದೊಡ್ಡ ಕಾಣಿಕೆ. ಸಂತೋಷದ ಅಭಿವ್ಯಕ್ತಿ. ಇದು ಬರಬೇಕಾದರೆ ಏನು ಮಾಡಬೇಕು? ಪ್ರಶ್ನೆ ಚೆನ್ನಾಗಿದೆ.

---

* ಜ್ಞಾನ ಯೋಗಾಶ್ರಮ, ಬಿಜಾಪುರ







ಒಂದಿಷ್ಟು ಸಾಧನೆ ಮಾಡಬೇಕು. ಅಸಾಧ್ಯ ಸಾಧನೆಗಳಲ್ಲ. ಸುಸಾಧ್ಯ ಸಾಧನೆಗಳು. ಸಾಧನೆಗಳಿಲ್ಲದಿದ್ದರೆ ಸಾಧ್ಯ ಹೇಗೆ ಆಗುತ್ತದೆ? ನಾವು ನಗಬೇಕು ಅಂದರೆ, ಹೀಗೇ ಆಗಬೇಕು ಅಂದರೆ, ಅದು ಹಾಗೆ ಆಗುವುದಿಲ್ಲ... ಸಾಧನೆ ಮಾಡಬೇಕು. ಸಿದ್ಧಿಯಾಗಬೇಕಾದರೆ ಸಾಧನೆ ಮಾಡಬೇಕು. ಸಾಧನೆಗಳಲ್ಲಿ ಅನೇಕ ಪ್ರಕಾರಗಳು, ಬಹಳ ಮುಖ್ಯವಾಗಿ ಎರಡು ಸಾಧನೆಗಳು, ಒಂದು 'ಕಠಿಣ' ಸಾಧನೆ, ಇನ್ನೊಂದು 'ಸುಲಭ' ಸಾಧನೆ. ಕೆಲವು ಸಾಧನೆಗಳು ಸುಲಭ ಅನಿಸಬಹುದು. ಇನ್ನು ಕೆಲವು ಕಠಿಣ ಅನಿಸಬಹುದು. ಮನುಷ್ಯ ಬಯಸೋದು ಸುಲಭ ಸಾಧನೆಯನ್ನು, ಅದು ಸರಳವಾಗಿರಬೇಕು. ಸಾಧನೆ ಸವಿಸವಿಯಾಗಿರಬೇಕು. ಪ್ರತಿಕ್ಷಣ ಸಾಧನೆ ಮಾಡುವಾಗ ಸುಖ ಸಿಗುತ್ತಿರಬೇಕು. ಯಾವುದನ್ನು ಮಾಡುವುದಕ್ಕೆ ಉತ್ಸಾಹ ಇರುತ್ತದೆ ಅದು ಸುಲಭ ಸಾಧನೆ. ಉತ್ಸಾಹ ಇಲ್ಲದೆ ಮಾಡುವ ಸಾಧನೆ ಕಠಿಣ ಅನಿಸುತ್ತದೆ.

ಒಬ್ಬ ಹೆಣ್ಣು ಮಗಳು, ರಾತ್ರಿ ಆಗಿದೆ, ಕೈಯಲ್ಲಿ ಹೆಣಿಗೆ ಇದೆ, ಮಗು ಇಂದೋ ನಾಳೆಯೋ ಆಗುವ ಸಂದರ್ಭ. ಅತ್ತೆ ಹೇಳುತ್ತಾಳೆ... ಯಾಕೆ ಇಷ್ಟು ತ್ರಾಸು ತಗೋತೀಯಾ, ವಿಶ್ರಾಂತಿ ತಗೋ... ಹೆಣೆಯೋದು ಸಾಕು. ಆಕೆ ಹೇಳುತ್ತಾಳೆ ಇದರಲ್ಲಿ ಏನು ತ್ರಾಸು ಇದೆ ಹೇಳು? ಆಕೆಗೆ ತ್ರಾಸು ಆಗುತ್ತಿಲ್ಲ... ಏಕೆಂದರೆ ಮುಂದೆ ಹುಟ್ಟುವ ಮಗುವಿನ ತಲೆಗೆ ಟೋಪಿ ಹೆಣೆಯಲು ಶುರು ಮಾಡಿದ್ದಾಳೆ. ರಾತ್ರಿ ಉಂಡದ್ದು ಗೊತ್ತಿಲ್ಲ. ಹಗಲು-ರಾತ್ರಿ ಆಗಿದ್ದು ಗೊತ್ತಿಲ್ಲ... ಏನು ಉತ್ಸಾಹ, ತ್ರಾಸಿಲ್ಲ, ಪ್ರೀತಿ ಅದು. ಹೀಗೆ ಯಾವುದೇ ಕೆಲಸ ಮಾಡಲು ಉತ್ಸಾಹವಿದೆ... ಆ ಕೆಲಸ ಸರಳವಾಗುತ್ತದೆ, ಉತ್ಸಾಹವಿಲ್ಲ... ಕಠಿಣವಾಗುತ್ತದೆ. ಬದುಕಿನಲ್ಲಿ ಉತ್ಸಾಹ ಬಹಳ ಮುಖ್ಯ, ಬಹಳ ಮಹತ್ವದ್ದು.

ಯುರೋಪಿನ ಒಬ್ಬ ಸಾಮ್ರಾಟ ಹೇಳುತ್ತಿದ್ದ ಯಾವುದೇ ಕೆಲಸ ಮಾಡಬೇಕಾದರೆ, ಇದು ನನಗೆ ಆಗಲ್ಲ ಅಂತ ಮನಸ್ಸಿನೊಳಗೆ ಅಂದುಕೊಳ್ಳಬೇಡ, ಇದೇನು ಮಹಾ ಅಂದುಕೊಳ್ಳಿ, ಉತ್ಸಾಹದಿಂದ ಮಾಡಿರಿ, ಕೆಲಸ ಬಹು ಸರಳ ಅನಿಸುತ್ತದೆ.

ಉತ್ಸಾಹ ಇಲ್ಲದೆ ಇದ್ದಾಗ... ಮನೆಯಲ್ಲಿ ಕಸ ಹೊಡೆಯೋದು ಭಾರ ಅನಿಸುತ್ತದೆ. ಒಂದು ಹೆಣ್ಣಿಗೆ ತನ್ನ ತಾಯಿ ತವರು ಮನೆಯಿಂದ ಬರುತ್ತಾಳೆ ಎಂಬುದು ಗೊತ್ತಾದಾಗ, ಆಕೆಗೆ ಮನೆ ತೋರಿಸಬೇಕು ಅನ್ನುವ ಉತ್ಸಾಹ ಹೆಚ್ಚಿ, ಬೆಳಗ್ಗೆ ೪ ಗಂಟೆಗೆ ಎದ್ದು ಮನೆಯನ್ನು ಸ್ವಚ್ಛ ಮಾಡಿ, ರಂಗೋಲಿ ಇಟ್ಟು, ಏನೆಲ್ಲಾ ಕೆಲಸ ಮಾಡಿದರೂ ಭಾರ ಅನಿಸುವುದಿಲ್ಲ. ಅದೇ ಕೆಲಸ ಮೊದಲು ಕಠಿಣ ಅನಿಸುತ್ತಿತ್ತು, ಈಗ ಸರಳ ಅನಿಸಿದೆ. ಏಕೆ? ಉತ್ಸಾಹವಿದೆ.

ಪತಂಜಲಿ ಎನ್ನುವ ಮಹಾನುಭಾವ, ಅಪ್ರತಿಮ ವಿದ್ವಾಂಸ. ಆತ ಹೇಳುತ್ತಾನೆ.... ಮನಷ್ಯನೇ ಏನೂ ಮಾಡಬೇಡ ಉತ್ಸಾಹ ತುಂಬಿಕೋ, ಎಷ್ಟು ಅಂದರೆ ನೂರು ವರ್ಷ ಮಾಡುವಷ್ಟು ಉತ್ಸಾಹ ತುಂಬಿಕೋ. ಬದುಕಿನಲ್ಲಿ ಉತ್ಸಾಹ ಇರಬೇಕು, ನೂರು ವರ್ಷ ಉತ್ಸಾಹದಿಂದ ಬದುಕಬೇಕು, ಏನೇ ಮಾಡಿದರೂ, ಉತ್ಸಾಹದಿಂದ ಮಾಡು.

ಆಫೀಸಿನಲ್ಲಿ ಕೆಲಸ ಭಾರವಾಗುತ್ತದೆ ಏಕೆ? ಅದು ಒಲ್ಲದ ಕೆಲಸ. ಮನೆಯಲ್ಲಿ ಕೆಲಸ ಸುಲಭ ಅನಿಸುತ್ತದೆ ಏಕೆ? ಅದು ಬೇಕಾದ ಕೆಲಸ. ಒಂದು ಭಾರ ಆಗುತ್ತದೆ. ಇನ್ನೊಂದು ನಿರಾಯಾಸ ಆಗುತ್ತದೆ. ಬೇಡವಾದ ಕೆಲಸ ಭಾರ ಆಗುತ್ತದೆ, ಬೇಕಾದ ಕೆಲಸ ಸುಲಭ ಆಗುತ್ತದೆ. ಕೆಲಸ ಭಾರ ಅಲ್ಲ... ಅದನ್ನು ಹಗುರ ಮಾಡೋದು ಎದೆ. ಈ ಸಾಧನೆ ಬಹಳ ಸುಲಭ. ಭಾವನೆಗಳನ್ನು ಹೃದಯದಲ್ಲಿ ತುಂಬಿಕೋ, ಉತ್ಸಾಹ ತುಂಬಿಕೋ.

ಮೊದಲನೆಯದು ಉತ್ಸಾಹ, ಎರಡನೆಯದು ಪಡೆಯಲೇಬೇಕೆಂಬ ನಿರ್ಧಾರ, ಸಂಕಲ್ಪ. ಇದನ್ನು ಮಾಡಲೇಬೇಕು, ಪಡೆದೇ ತೀರಬೇಕು ಎಂಬ ನಿರ್ಧಾರ ಇರಬೇಕು. ಹೋದರೆ ಹೋಯಿತು, ಆದಂಗೆ ಆಯಿತು ಅಂದುಕೊಂಡರೆ ಏನೂ ಆಗುವುದಿಲ್ಲ.

ಒಂದು ಎಲೆ ಮೇಲೆ ಇಬ್ಬನಿ ಕುಳಿತಿತ್ತು. ಅಲ್ಲಿಗೆ ಒಬ್ಬ ಬಂದ, ಆತ ಇಬ್ಬನಿಯನ್ನು ಕೇಳಿದ, ಅಲ್ಲೋ... ಒಬ್ಬನೇ ಕುಳಿತಿದ್ದೀಯಲ್ಲ ಇನ್ನೊಂದು ಕ್ಷಣದಲ್ಲಿ ಗಾಳಿ ಬಂದರೆ ನೆಲಕ್ಕೆ ಬಿದ್ದು ಹೋಗುತ್ತೀಯಲ್ಲ! ಎಂದನು. ಇಬ್ಬನಿ ಹೇಳಿತು... ನಾನು ಏಕೆ ಕುಳಿತಿದ್ದೇನೆ ಗೊತ್ತೇ?... ಆಕಾಶಕ್ಕೆ ಹೋಗಬೇಕು ಅದಕ್ಕೆ ಕುಳಿತಿದ್ದೇನೆ ಅದು ನನ್ನ ಕನಸು ಎಂದಿತು. ಈತನಿಗೆ ನಗು ಬಂತು... ನಿನ್ನದು ಹುಚ್ಚನ ಕನಸು. ಕಾಲಿರುವ ನನಗೇ ಆಗುವುದಿಲ್ಲ, ಇನ್ನು ನೀನು ಹೇಗೆ ಮೇಲಕ್ಕೆ ಹೋಗುತ್ತೀಯಾ? ಎಂದನು. ಅದಕ್ಕೆ ಇಬ್ಬನಿ ಹೇಳಿತು... ನಾನು ಆಕಾಶಕ್ಕೆ ಏರುವವನೇ,





ನಿರ್ಧಾರ ಮಾಡಿದ್ದೇನೆ. ಇನ್ನು ಅರ್ಧ ತಾಸು ನೀನು ಇಲ್ಲೇ ಇದ್ದುನೋಡು. ಕೆಲವೇ ಕ್ಷಣಗಳಲ್ಲಿ ಸೂರ್ಯನ ಕಿರಣಗಳು ಇಬ್ಬನಿ ಮೇಲೆ ಬಿದ್ದವು. ಕಿರಣಗಳು ಇಬ್ಬನಿಯನ್ನು ಕುಡಿಯಲು ಶುರು ಮಾಡಿದವು. ಬಿಂದು ಕಿರಣಗಳ ಮೂಲಕ ಮೇಲಕ್ಕೆ ಏರಿತು. ಇಬ್ಬನಿ ಹೇಳಿತು ಮನುಷ್ಯನೇ ನೋಡು ನಾನು ಹೇಗೆ ಮೇಲಕ್ಕೆ ಏರಿದೆ ! ಒಂದು ವೇಳೆ ನೀನು ನನ್ನ ಕುಡಿದಿದ್ದರೂ ನಿಮ್ಮ ಮೈ ಬೆವರಿನ ಮೂಲಕ ಮೇಲೆ ಏರುತ್ತಿದ್ದೆ ಎಂದಿತು. ಇಷ್ಟು ನಿರ್ಧಾರ ಬದುಕಿನಲ್ಲಿ ಇರಬೇಕು.

'ಸಾಕ್ರಟೀಸ್' ದೊಡ್ಡ ಸಂತ, ಆತನ ಜೀವನ ಶುದ್ಧ. ಆತನನ್ನು ಸಾವಿರಸಾವಿರ ಜನ ಭೇಟಿ ಆಗುತ್ತಿದ್ದರು. ಆತನ ಮಾತುಗಳನ್ನು ಕೇಳಿದ ಯುವಕರು ಜೀವನದಲ್ಲಿ ಮೇಲಕ್ಕೆ ಏರುತ್ತಿದ್ದರು. ಒಮ್ಮೆ ಆತನ ಬಳಿಗೆ ಒಬ್ಬ ಹೆಂಗಸು ಬಂದು ಹೇಳುತ್ತಾಳೆ... ನೀವು ಹತ್ತು ಹದಿನೈದು ವರ್ಷ ಕಷ್ಟಪಟ್ಟು ಯುವಕರನ್ನು ಮೇಲಕ್ಕೆ ಏರಿಸಿದ್ದೀರಲ್ಲ ಅವರನ್ನು ನಾನು ಒಂದು ಕ್ಷಣದಲ್ಲಿ ಕೆಡವಿ ಬಿಡುತ್ತೇನೆ, ಅವರು ಹೇಗೆ ಏರಿದ್ದಾರೆ ಅಂದರೆ ಬೀಳುವ ಹಾಗೆ ಏರಿದ್ದಾರೆ. ಆಕೆಯ ಮಾತು ಇಂದಿಗೂ ನಿಜ. ಸಾಕ್ರಟೀಸ್ ಆ ಹೆಂಗಸನ್ನು ಕೇಳಿದ ಇದರಲ್ಲಿ ನಿನ್ನ ಸಾಧನೆ ಏನು? ಈ ಸಾಧನೆಗೆ ನಿನ್ನ ಜಗತ್ತು ಹೊಗಳುತ್ತದೇನು? ಇಲ್ಲ. ಬದುಕಿನಲ್ಲಿ ಏರುವುದಕ್ಕೆ ತ್ರಾಸಿದೆ, ಇಳಿಯುವುದಕ್ಕೆ ತ್ರಾಸಿಲ್ಲ. ನೈತಿಕತೆ ಬಲವಾಗಿರಬೇಕು. ಮನೆ ತಾನಾಗೇ ಬೀಳುತ್ತದೆ, ಆದರೆ ಕಟ್ಟುವುದನ್ನು ಹೇಳು. ಕೆಡುವುದು, ಜಾರಿಸುವುದು, ಬೀಳಿಸುವುದು ಮಹತ್ವ ಅಲ್ಲ. ಕಟ್ಟುವುದು, ಏರಿಸೋದು ಬಹಳ ಮಹತ್ವದ್ದು.

ಗಾಂಧೀಜಿರವರಿಗೆ ಅರವಿಂದರಿಗೆ ತಿಲಕರಿಗೆ ಏಕೆ ಮಹತ್ವ ಕೊಟ್ಟಿದ್ದೇವೆ? ಏಕೆಂದರೆ ಅವರು ಬದುಕಿನಲ್ಲಿ ಬಹಳ ಎತ್ತರಕ್ಕೆ ಏರಿದ್ದಾರೆ. ಗಾಂಧೀಜಿಯವರ ಮೈಮನ ಎಷ್ಟು ಶುದ್ಧ. ತಿಲಕರು ಭಾರತವನ್ನು ಎಷ್ಟು ಪ್ರೀತಿಸಿದರು, ತನಗಾಗಿ ಅಲ್ಲ. ಅರವಿಂದ ಮಹರ್ಷಿಗಳು ಭಾರತದ ಅಖಂಡತೆಯ ಕನಸು ಕಂಡರು. ಇವರು ಯಾವುದು ಸುಲಭಸಾಧ್ಯವಲ್ಲವೋ ಅದನ್ನು ಸಾಧಿಸಿದರು. ಹೀಗಾಗಿ ಅವರಿಗೆ ಮಹತ್ವ ಕೊಟ್ಟಿದ್ದೇವೆ.

ಮೂರನೆಯದು ಈ ನಿರ್ಧಾರವನ್ನು ಕ್ರಿಯಾರೂಪ ಮಾಡಬೇಕಾದರೆ ಸ್ವಲ್ಪ ತ್ಯಾಗ ಮಾಡಬೇಕಾಗುತ್ತದೆ. ಆಕರ್ಷಣೆಗಳನ್ನು ಸ್ವಲ್ಪ ತ್ಯಾಗ ಮಾಡಬೇಕು. ಏಕೆಂದರೆ ಸಾಧಿಸಬೇಕಲ್ಲ. ಇದು ಸ್ವಲ್ಪ ಕಷ್ಟ ಆಗುತ್ತದೆ. ತ್ಯಾಗ ಬಹಳ ಮಹತ್ವದ್ದು. ಬದುಕು ಅಮೃತವಾಗಬೇಕಾದರೆ ಒಂದಿಷ್ಟು ತ್ಯಾಗ ಮಾಡಬೇಕು. ಬೀಡಿ ಸೇದುತ್ತಾರೆ, ಸುಖ ಸಿಗುತ್ತದೆ ನಿಜ. ಆದರೆ ಬೀಡಿಯ ಸುಖ ತ್ಯಾಗ ಮಾಡಿದರೆ, ಆರೋಗ್ಯದ ಸುಖ ಸಿಗುತ್ತದೆ. ಇನ್ನೊಬ್ಬರ ಬಗ್ಗೆ ಟೀಕೆಟಿಪ್ಪಣಿ ಮಾಡಿದರೆ ಮಜ ಅನಿಸುತ್ತದೆ, ಸಮಯ ಕಳೆದದ್ದು ಗೊತ್ತಾಗುವುದಿಲ್ಲ. ಸಂತೋಷ ಆಗುತ್ತದೆ. ಆದರೆ ಇದನ್ನು ತ್ಯಾಗ ಮಾಡದಿದ್ದರೆ ಶ್ಯಾಣೆ ಆಗೋದು ಹೇಗೆ?

ಬದುಕಿನಲ್ಲಿ ಏನನ್ನಾದರೂ ಸಾಧಿಸಬೇಕಾದರೆ ಈ ಮೂರು ಬೇಕಾಗುತ್ತದೆ. ಅದು ಭೌತಿಕ ಸಾಧನೆ ಇರಬಹುದು, ಆಧ್ಯಾತ್ಮಿಕ ಸಾಧನೆ ಇರಬಹುದು.

ಮನೆ ಕಟ್ಟಬೇಕು ಅಂದ್ರೆ, ಮನೆಯಲ್ಲಿ ಸುಖದ ಕ್ಷಣಗಳನ್ನು ಪಡೆಯಬೇಕು ಅಂದರೆ, ಸುಖದ ಸೌಧ ಕಟ್ಟಲು ಒಂದಿಷ್ಟು ಸುಖದ ಕ್ಷಣಗಳನ್ನು ತ್ಯಾಗ ಮಾಡಬೇಕು.

ಒಬ್ಬ ಹುಡುಗ ವಿಜ್ಞಾನಿ ಆಗಬೇಕು, ವೈದ್ಯ ಆಗಬೇಕು ಅಂದುಕೊಂಡಿದ್ದಾನೆ. ಅಂಥವನಿಗೆ ಸುಖದ ಕಡೆ, ಟಿವಿಯ ಕಡೆ ಮನಸು ಹರಿಯುತ್ತಾ ಹೋದರೆ ಸಾಧಿಸೋದು ಹೇಗೆ? ಕೆಲವು ವಿಜ್ಞಾನಿಗಳಿಗೆ ಲಗ್ನದ ಪರಿವಿಲ್ಲ, ಸಂಶೋಧನೆಗಳಿಗಾಗಿ ಸಾಂಸಾರಿಕ ಸುಖಗಳನ್ನು ತ್ಯಾಗ ಮಾಡಿದರು. ಮನುಕುಲದ ಅನುಕೂಲಕ್ಕೆ ತ್ಯಾಗ ಮಾಡಿದರು. ಎಂಥೆಂಥ ವಿಜ್ಞಾನಿಗಳು ಎಡಿಂಗ್ಟನ್, ಒಪೆನ್ ಏವರ್, ಐನ್‌ಸ್ಟೈನ್, ಡಾಲ್ಟನ್ ಎಂತಹ ಮಹಾನುಭಾವರು. ಕೆಲವರು ಪ್ರಾಣವನ್ನೇ ಕೊಟ್ಟರು. ರೋಜರ್ ಬೆಕನ್ ಎಂಬ ವಿಜ್ಞಾನಿಯನ್ನು ಮುಗಿಸಿಯೇಬಿಟ್ಟರು. ಋಷಿಗಳು ಏನು ತ್ಯಾಗ ಮಾಡಿದರು. ವಿಶ್ವದ ಅದ್ಭುತ ಜ್ಞಾನವನ್ನು ಸಂಪಾದಿಸಿದರು.

ನೆನಪಿನಲ್ಲಿಡಿ... ಒಂದನೆಯದು 'ಉತ್ಸಾಹ', ಎರಡನೆಯದು 'ಸಂಕಲ್ಪ', ಮೂರನೆಯದು 'ತ್ಯಾಗ'. ಈ ಮೂರು ಸಂಗತಿಗಳು ಬಹಳ ಅವಶ್ಯ. ಈ ಮೂರು ಯಶಸ್ಸಿನ ಮೂಲ ಸೂತ್ರಗಳು.

(ಕೃಪೆ: ಧಾರಿಣಿ)





ಲೇಖನ

# ಮಹಾದೇವಿಯಕ್ಕ

- ಶಾಂತಾ ಇಮ್ರಾಪೂರ *

(ಕಳೆದ ಸಂಚಿಕೆಯಿಂದ)

ಆಕೆಯೊಲಿದ "ಒಡಲಿಲ್ಲದ ಸುಡಿಯಿಲ್ಲದ ಕಡೆಯಿಲ್ಲದ" ಗಂಡ ಆಕೆಗೆ 'ನಲ್ಲ'ನೂ ಆಗಿದ್ದಾನೆ. "ಬಿಚ್ಚಿ ಬೇರಾಗದ ಭಾವದಲ್ಲಿ", "ಎರಡಳಿದು ಒಂದಾಗುವ" ಸಾಮರಸ್ಯದ ದಾಂಪತ್ಯಕ್ಕಾಗಿ ಕಾತರಿಸುವ ಮಹಾದೇವಿಯಕ್ಕ ತನ್ನ "ಇರವನ್ನು ಇಲ್ಲವಾಗಿಸಿ" ತನು-ಮನದ ಸುಖವನ್ನು ಸೂರೆಗೊಂಡಿರುವ, ತಾನೊಲಿದ ನಿಸ್ಸೀಮ ಚಲುವನಿಗಾಗಿ ಸಂಭ್ರಮಿಸುವ, ಕನವರಿಸುವ, ಕಾತರಿಸುವ ವಿವಿಧ ಭಾವಸ್ತರಗಳು ವಚನಗಳಲ್ಲಿ ಪ್ರತಿಫಲಿಸಿವೆ. ಅಂತೆಯೇ ಅಕ್ಕನ ವಚನಗಳಲ್ಲಿ ದಾಂಪತ್ಯಪ್ರೇಮದ ವಿವಿಧ ಭಾವರಾಗಗಳ ಬೆಚ್ಚನೆಯ ಲೋಕ ಜೀವಂತವಾಗಿದೆ. ಬಹುಪಾಲು ವಚನಗಳಲ್ಲಿ ಆಕೆಯ ಮಧುರಭಕ್ತಿ ತನ್ಮಯತೆಯಿದೆ.

**ಎನ್ನ ಮನವ ಮಾರುಗೊಂಡನವ್ವಾ**
**ಎನ್ನ ತನುವ ಸೂರೆಗೊಂಡನವ್ವಾ**
**ಎನ್ನ ಸುಖವನ್ನೊಪ್ಪುಗೊಂಡನವ್ವಾ**
**ಎನ್ನ ಇರವನಿಂಬುಗೊಂಡನವ್ವಾ**
**ಚೆನ್ನಮಲ್ಲಿಕಾರ್ಜುನನ ಒಲುಮೆಯವಳಾನು.**

ಕನಸು-ಕಲ್ಪನೆಗಳಲ್ಲಿ ವಿಜೃಂಭಿಸಿದ 'ಹೊಳೆವ ಕೆಂಜೆಡೆಗಳ, ಫಣಿಮಣಿ ಕರ್ಣಕುಂಡಲದವ' ನೊಂದಿಗೆ ಬೆರೆಸಿಬೇರಿಲ್ಲದಂತಾಗುವ ಉತ್ಕಟ ಅಪೇಕ್ಷೆ, ಅಲೌಕಿಕ ಆದರ್ಶವನ್ನು ಲೋಕಧರ್ಮವಾಗಿಸಿಕೊಳ್ಳುವ ವಿಲಕ್ಷಣ ಒಲುಮೆ ಕನಸಾಗಿ ಸಾಕಾರಗೊಂಡಿದೆ; ಒಲುಮೆಯ ಸುಖ ಕಾವ್ಯವಾಗಿದೆ.

**ಅಕ್ಕ ಕೇಳಕ್ಕಾ, ನಾನೊಂದು ಕನಸುಕಂಡೆ**
**ಚಿಕ್ಕ ಚಿಕ್ಕ ಜಡೆಗಳ ಸುಲಿಪಲ್ಲ ಗೊರವನು**
**ಬಂದೆನ್ನ ನೆರೆದ ನೋಡವ್ವಾ**
**ಆತನನಪ್ಪಿಕೊಂಡು ತಳವೆಳಗಾದೆನು**
**ಚೆನ್ನಮಲ್ಲಿಕಾರ್ಜುನನ ಕಂಡು**
**ಕಣ್ಣ ಮುಚ್ಚಿ ತೆರೆದು ತಳವೆಳಗಾದೆನು.**

ಪ್ರಾಪಂಚಿಕ ಪ್ರೇಮ-ಕಾಮಗಳನ್ನು ತಿರಸ್ಕರಿಸಿದ ಅಕ್ಕ, ದೈವೀ ಒಲುಮೆಗಾಗಿ ನಿರಂತರ ಕಾತರಿಸಿದ ವಿರಹಿಣಿಯೂ ಹೌದು. ಸಮರತಿ ಸಮಸುಖದ ತೀವ್ರ ಹಂಬಲ ಅಕೆಯ ವಿರಹವೇದನೆಯನ್ನು ಉತ್ಕಟವಾಗಿಸಿದೆ. "ಕಬ್ಬುನ ಉಂಡ ನೀರಿನಂತೆ, ಚಿನ್ನದೊಳಗಣ ಬಣ್ಣದಂತೆ, ಕರ್ಪುರಗಿರಿಯ ಉರಿಯಕೊಂಬಂತೆ" ಒಂದಾಗುವ ಸಂಯೋಗದ ಅಪೇಕ್ಷೆ, ನಿರಾಸೆಯ ವಿವಿಧ ಭಾವರಾಗಗಳು ಆಕೆಯ ವಚನಗಳಲ್ಲಿ ಸ್ಥಾಯಿ-ಸಂಚಾರಿಯಾಗಿ ಸುಳಿದಾಡಿವೆ. "ಹಿಂಡನಗಲಿ ಹಿಡಿವಡೆದ ಕುಂಜರ ತನ್ನ ವಿಂಧ್ಯವ ನೆನೆವಂತೆ, ಬಂಧನಕ್ಕೆ ಬಂದ ಗಿಳಿ ತನ್ನ ಬಂಧುವ ನೆನೆವಂತೆ" ಆರ್ತಳಾಗಿ ಮೊರೆಯಿಡುವ ಅಕ್ಕನ ತಳಮಳ ವ್ಯಾಕುಲತೆ ವಿಯೋಗದುಃಖ ಹಾಡಾಗಿ ಹರಿದಿದೆ.

**ಬಂದಹನೆಂದು ಬಟ್ಟೆಯ ನೋಡಿ**
**ಬಾರದಿದ್ದಡೆ ಕರಗಿ ಕೊರಗಿದೆನವ್ವಾ**
**ತಡವಾದಡೆ ಬಡವಾದೆ ತಾಯೆ**
**ಚೆನ್ನಮಲ್ಲಿಕಾರ್ಜುನನ ಒಂದಿರುಳಗಲಿದಡೆ**
**ತೆಕ್ಕೆ ಸಡಿಲಿದ ಜಕ್ಕವಕ್ಕಿಯಂತಾದೆನವ್ವಾ.**

"ಇಹಕ್ಕೊಬ್ಬ ಗಂಡನೇ ? ಪರಕ್ಕೊಬ್ಬ ಗಂಡನೇ ?" ಎನ್ನುವ ತಾತ್ವಿಕ ನೆಲೆಯ ಗೊಂದಲವನ್ನು ಒಪ್ಪಿಯೇ ಇಹಪರವೆರಡಕ್ಕೂ ಪರಮಾತ್ಮನನ್ನೇ ಆತ್ಮ ಸಂಗಾತಿಯಾಗಿಸಿಕೊಂಡ ಅಕ್ಕನ ವರ್ತನೆ ಸಮಕಾಲೀನ ವ್ಯವಸ್ಥೆಗೆ ಲೋಕವಿರೋಧಿಯಾಗಿ ಕಂಡಿದೆ. ಆಕೆಯ ಪಾರಮಾರ್ಥಿಕ ವ್ಯಕ್ತಿತ್ವವನ್ನು ಅರಿಯದೇ ಒಂಟಿ ಹೆಣ್ಣೆಂದು ಬೆನ್ನತ್ತಿ ಅಪಮಾನಿಸಿದ ವಾಸ್ತವವನ್ನು ಧೈರ್ಯ ವಿವೇಕದಿಂದ ಎದುರಿಸಿದ ರೀತಿ ಹೀಗಿದೆ :

**ಬಟ್ಟಿಹ ಮೊಲೆಯ ಭರದ ಜವ್ವನದ ಚೆಲುವ ಕಂಡು**
**ಬಂದಿರಣ್ಣಾ**
**ಅಣ್ಣಾ, ನಾನು ಹೆಂಗೂಸಲ್ಲ; ಅಣ್ಣಾ ನಾನು ಸೂಳೆಯಲ್ಲ**
**ಅಣ್ಣಾ, ಮತ್ತೆ ನನ್ನ ಕಂಡು ಆರೆಂದು ಬಂದಿರಣ್ಣಾ ?**

* "ಚಿತ್ತಾರ", ೧೨ನೇ ಕ್ರಾಸ್, ನಿರ್ಮಲನಗರ, ಧಾರವಾಡ-೫೮೦ ೦೦೩.







**ಚೆನ್ನಮಲ್ಲಿಕಾರ್ಜುನನಲ್ಲದೆ ಮಿಕ್ಕಿದ ಪರಪುರುಷರು**
**ನಮಗಾಗದ ಮೊರೆ ನೋಡಣ್ಣಾ.**

ಲೌಕಿಕ ಜಗತ್ತಿನ ಸ್ನೇಹ-ಸಂಬಂಧಗಳನ್ನೆಲ್ಲಾ ನಿರಾಕರಿಸಿದ ಕಾರಣವಾಗಿ ಮಹಾದೇವಿಯಕ್ಕ ಅನ್ನ-ನೀರು-ಆಶ್ರಯಗಳಿಂದಲೂ ವಂಚಿತಳಾಗಬೇಕಾದ ಬಿಕ್ಕಟ್ಟುಗಳನ್ನು ಎದುರಿಸಿದ್ದಾಳೆ. "ಲೋಕದಲ್ಲಿ ಹುಟ್ಟಿದ ಬಳಿಕ ಸ್ತುತಿ-ನಿಂದೆಗಳು ಬಂದಡೆ ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕೆನ್ನುವ" ಸಂಯಮ, ಸ್ಥಿತಪ್ರಜ್ಞೆ, "ಕಿಡಿಕಿಡಿ ಕೆದರಿದಡೆ ಎನಗೆ ಹಸಿವು-ತೃಷೆಯಡಗಿತ್ತೆಂಬೆನು, ಮುಗಿಲು ಹರಿದು ಬಿದ್ದಡೆ ಎನಗೆ ಮಜ್ಜನಕ್ಕೆರೆದರೆಂಬೆನು..... ಶಿರಹರಿದು ಬಿದ್ದಡೆ, ಪ್ರಾಣ ನಿಮಗರ್ಪಿತವೆಂಬೆನು" ಎನ್ನುವ ಆತ್ಮಪ್ರತ್ಯಯ ಮಹಾದೇವಿಯಕ್ಕನ ಹೋರಾಟದ ಹಾದಿಯನ್ನು ಸುಗಮಗೊಳಿಸಿದೆ.

ಮಹಾದೇವಿಯಕ್ಕನ ಅನುಭಾವದ ನೆಲೆ ವೈರಾಗ್ಯ ಮೂಲವಾದುದು. ಲೌಕಿಕತೆಗೆಳೆಸುವ ದೇಹ-ಮನಸ್ಸು-ಬುದ್ಧಿಭಾವಗಳನ್ನು ಆಧ್ಯಾತ್ಮಿಕತೆಗೆ ವಿಸ್ತರಿಸುವಲ್ಲಿ ಆಕೆ ಎದುರಿಸಿದ ಸಂದಿಗ್ಧತೆ, ಇಹ-ಪರಗಳ ದ್ವಂದ್ವ ಆಕೆಯ ವಚನಗಳಲ್ಲಿ ವ್ಯಕ್ತವಾಗಿದೆ. ಲೌಕಿಕ ಅಸ್ತಿತ್ವದ ಅನಿವಾರ್ಯತೆ, ದೇಹ-ಭಾವದ ಪ್ರಾಕೃತಿಕ ಮಿತಿಗಳು, ಅಲೌಕಿಕದ ಆಕರ್ಷಣೆ ಇತ್ಯಾದಿ ವೈದೃಶ್ಯಗಳೊಂದಿಗೆ ಸೆಣಸಾಡುತ್ತ ಅನುಭವಿಸಿದ ಆತ್ಮವೇದನೆ ಅಸಹನೀಯವಾದುದು. "ಅವಿಗೆಯ ಕಿಚ್ಚಿನಂತೆ ಸುಳಿಸುಳಿದು ಬೆಂದ" ಸಂದಿಗ್ಧತೆಯನ್ನು ಆರ್ತಳಾಗಿ ನಿವೇದಿಸಿಕೊಂಡಿದ್ದಾಳೆ.

**ಎನ್ನ ಕಾಯ ಮಣ್ಣು, ಜೀವ ಬಯಲು**
**ಆವುದು ಹಿಡಿವೆನಯ್ಯಾ**
**ದೇವಾ ನಿಮ್ಮನಾವ ಪರಿಯಲ್ಲಿ ನೆನೆವೆನಯ್ಯಾ**
**ಎನ್ನ ಮಾಯೆಯ ಮಾಣಿಸಯ್ಯಾ**
**ಚೆನ್ನಮಲ್ಲಿಕಾರ್ಜುನಾ.**

ಅಕ್ಕಮಹಾದೇವಿಯ ಉಪಲಬ್ಧ ವಚನಗಳಲ್ಲಿ ಆಕೆಯ ವೈಯಕ್ತಿಕ ಸಾಧನೆಯ ತೊಳಲಾಟವೇ ಅಧಿಕವಾಗಿದ್ದರೂ, ಆಕೆಯ ಆಧ್ಯಾತ್ಮಿಕ ಆಶಯವನ್ನು ದೃಢಗೊಳಿಸಿದ ಧಾರ್ಮಿಕ-ತಾತ್ವಿಕ ವಿಚಾರಗಳು ಹಲವು ವಚನಗಳಲ್ಲಿ ಪ್ರಕಟವಾಗಿವೆ. ಆತ್ಮಶೋಧನೆಯ ಅಂತರ್ಮುಖಿ ವ್ಯಕ್ತಿತ್ವದ ಅಕ್ಕಮಹಾದೇವಿ ತಾನು ಆದರ್ಶವಾಗಿ ಆರಾಧಿಸಿದ ಧರ್ಮತತ್ತ್ವಗಳನ್ನು ವಚನಗಳಲ್ಲಿ ನಿರೂಪಿಸಿದ್ದಾಳೆ. ಜೀವ-ಜಗತ್ತು-ದೇವರು, ಷಟ್‌ಸ್ಥಲ, ಅಷ್ಟಾವರಣ, ಗುರು-ಲಿಂಗ-ಜಂಗಮ ಇತ್ಯಾದಿ ತಾತ್ವಿಕ ವಿವೇಚನೆ '**ಶರಣಸತಿ-ಲಿಂಗಪತಿ**'ಯ ಆದರ್ಶದ ವಿವರಣೆಯಲ್ಲಿ ಅಕ್ಕನ ತಾತ್ವಿಕ ಸ್ಪಷ್ಟತೆ, ಸೈದ್ಧಾಂತಿಕ ತಿಳುವಳಿಕೆ ಕಂಡುಬರುತ್ತದೆ. ಲೌಕಿಕತೆಗೆ ವಿಮುಖಳಾದರೂ ಸಾಮಾಜಿಕ ವಾಸ್ತವತೆಯನ್ನು ಮರೆತಿಲ್ಲ. ಸಮಾಜ ಸುಧಾರಣೆ, ನೀತಿ ಪ್ರತಿಪಾದನೆಯು ಉದ್ದೇಶ ಆಕೆಯುದಲ್ಲವಾದರೂ, ಮನುಷ್ಯ ಪ್ರಪಂಚದ ವೈರುಧ್ಯಗಳನ್ನು ಕಂಡು ನೊಂದಿದ್ದಾಳೆ. ಡಾಂಭಿಕತೆ, ಅಜ್ಞಾನ, ಅಂಧಾನುಕರಣೆಯ ಅಪಾಯವನ್ನು ಎತ್ತಿ ತೋರಿಸಿದ್ದಾಳೆ. ಆಧ್ಯಾತ್ಮಿಕ ಅರಿವಿಗೆ ವಿಮುಖವಾಗಿ, ಪ್ರಾಪಂಚಿಕತೆಯಲ್ಲಿ ಮುಳುಗಿದ ಅಜ್ಞಾನಕ್ಕಾಗಿ ವಿಷಾದಿಸಿದ್ದಾಳೆ. ಲಿಂಗತಾರತಮ್ಯದ ಅಸಮಾನ ಸಂಸ್ಕೃತಿಯಲ್ಲಿ ಹೆಣ್ಣಿನ ಅಸ್ತಿತ್ವ, ವ್ಯಕ್ತಿತ್ವ ಮತ್ತು ಆಸಕ್ತಿಗಳನ್ನು ದಮನಿಸುವ ತಾರತಮ್ಯ ನೀತಿಯನ್ನು ಅರಿತಿರುವ ಅಕ್ಕ, ಹೆಣ್ಣೆಂಬ ಕಾರಣಕ್ಕಾಗಿಯೇ ತಾನು ಅನುಭವಿಸಿದ ಕಷ್ಟ ಕಾರ್ಪಣ್ಯಗಳ ಮೂಲವನ್ನು ಗ್ರಹಿಸಿದ್ದಾಳೆ. ಹೆಣ್ಣು-ಹೊನ್ನು-ಮಣ್ಣು '**ಮಾಯೆ**' ಎನ್ನುವ ಸ್ತ್ರೀನಿಷ್ಠ ಮಾಯೆಯ ಕಲ್ಪನೆಯನ್ನು ಶರಣರು ನಿರಾಕರಿಸಿದರು. ಮನುಷ್ಯರನ್ನು ಆತ್ಮೋನ್ನತಿಗೆ ವಿಮುಖಗೊಳಿಸಿ, ಪ್ರಾಪಂಚಿಕತೆಯನ್ನು ಪ್ರೇರೇಪಿಸುವ ಅಧೋಮುಖಿ ಶಕ್ತಿಯಾದ ಅಜ್ಞಾನ, ಅವಿದ್ಯೆಯನ್ನು ಮಾಯೆ ಎಂದು ಸಾರಿದರು. '**ಹೆಣ್ಣು ಮಾಯೆ**' ಎನ್ನುವ ಪುರುಷ ನೈತಿಕತೆಯನ್ನು ಒಪ್ಪದ ಮಾದೇವಿ ಲಿಂಗಾತೀತವಾಗಿ ಸ್ತ್ರೀ-ಪುರುಷರಿಬ್ಬರನ್ನೂ ಲೌಕಿಕತೆಗೆ ಕಟ್ಟಿ ಹಾಕುವ ಸಾಂಸಾರಿಕ ವ್ಯಾಮೋಹವನ್ನು, '**ಅಹಂಕಾರ, ಅಭಿಮಾನ**'ವನ್ನೇ '**ಮಾಯೆ**' ಎಂದು ಪರಾಮರ್ಶಿಸಿರುವಲ್ಲಿ ಮಹಾದೇವಿಯಕ್ಕನ ವೈಚಾರಿಕ ತೀಕ್ಷ್ಣತೆ ಕಂಡುಬರುತ್ತದೆ.

**ಪುರುಷನ ಮುಂದೆ ಮಾಯೆ,**
**ಸ್ತ್ರೀಯೆಂಬ ಅಭಿಮಾನವಾಗಿ ಕಾಡುವುದು**
**ಸ್ತ್ರೀಯ ಮುಂದೆ ಮಾಯೆ,**
**ಪುರುಷನೆಂಬ ಅಭಿಮಾನವಾಗಿ ಕಾಡುವುದು**
**ಲೋಕವೆಂಬ ಮಾಯೆಗೆ ಶರಣಚಾರಿತ್ರ್ಯ**
**ಮರುಳಾಗಿ ತೋರುವುದು**
**ಚೆನ್ನಮಲ್ಲಿಕಾರ್ಜುನನೊಲಿದ ಶರಣಂಗೆ ಮಾಯೆಯಿಲ್ಲ**
**ಮರಹಿಲ್ಲ ಅಭಿಮಾನವು ಇಲ್ಲ.**







ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಮೃದುಮಧುರ ಭಾಷೆಯಲ್ಲಿ ಗಹನವಾದುದನ್ನು ಭಾವವೇದ್ಯವಾಗಿಸುವುದು ಮಹಾದೇವಿಯಕ್ಕನ ವಚನಗಳ ವೈಶಿಷ್ಟ್ಯ. ಸಹಜ-ಸುಂದರ ಉಪಮೆ-ರೂಪಕ, ಆಕರ್ಷಕ ಶಬ್ದಚಿತ್ರಗಳಲ್ಲಿ ಅಮೂರ್ತ ವಿಚಾರಗಳನ್ನು ಮೂರ್ತಗೊಳಿಸುವ ರೀತಿ ಪರಿಣಾಮಕಾರಿಯಾಗಿದೆ. ಸರ್ವವ್ಯಾಪಕವಾದ '**ಪರತತ್ತ್ವ**'ದ ಅಗೋಚರ ಅವ್ಯಕ್ತ ಸ್ವರೂಪವನ್ನು 'ನೆಲದ ಮರೆಯ ನಿಧಾನದಂತೆ, ಫಲದ ಮರೆಯ ರುಚಿಯಂತೆ, ಶಿಲೆಯ ಮರೆಯ ಹೇಮದಂತೆ, ತಿಲದ ಮರೆಯ ತೈಲದಂತೆ' ಎಂದು ಹೊರಪ್ರಪಂಚದ ಭೌತಿಕ ಉಪಮೆಗಳಿಂದ '**ಭಾವದ ಮರೆಯ ಬ್ರಹ್ಮ**'ನಾದ ಪರಮಾತ್ಮನ ಅಭೌತಿಕ ಅಸ್ತಿತ್ವವನ್ನು ಧ್ವನಿಸಿರುವ ರೀತಿ ಅನುಪಮವಾಗಿದೆ.

ಮಹಾದೇವಿಯಕ್ಕನ ಉತ್ಕಟ ಭಕ್ತಿ, ಭಾವನಿರ್ಭರತೆ, ತೀವ್ರತೆ, ತನ್ಮಯತೆ ಆಕೆಯ ಅಭಿವ್ಯಕ್ತಿಯನ್ನು ವಿಶಿಷ್ಟವಾಗಿಸಿದೆ. ಸಾಲುಸಾಲು ಉಪಮೆಗಳು, ಅರ್ಥಪೂರ್ಣ ಪ್ರತಿಮೆಗಳು ವಚನಗಳ ಭಾವಸಂಪತ್ತನ್ನು ದ್ವಿಗುಣಗೊಳಿಸಿವೆ.

ಅಂತರಂಗದಲ್ಲಿ ಅರಿವನ್ನು ಜಾಗ್ರತಗೊಳಿಸಿ ಭವಬಂಧನ ಬಿಡಿಸಿದ ಸದ್ಗುರುವಿನ ಕರುಣೆಯು 'ಅರಲುಗೊಂಡ ಕೆರೆಗೆ ತೊರೆ ಬಂದು ಹಾಯ್ದಂತೆ, ಬರಲುಗೊಂಡ ಸಸಿಗೆ ಮಳೆ ಸುರಿದಂತೆ' ಅಪ್ಯಾಯಮಾನವಾಗಿದೆ. ಭಕ್ತಿಸಾಧನೆಯು 'ಬಲ್ಲಿದನು ಹಗೆಹ ತೆಗೆವನ್ನಬರ ಬಡವನ ಹರಣ ಹೋದ ತೆರನಂತೆ' ನಿಷ್ಠುರವಾದುದು. ಅಂತರಾತ್ಮವನ್ನರಿಯದ ಅಜ್ಞಾನದ ಸ್ಥಿತಿಯು 'ಅಗಸ ನೀರೊಳಗಿರ್ದು ಬಾಯಾರಿ ಸತ್ತಂತೆ' ಚಿಂತಾಜನಕವಾದುದು. ಇಷ್ಟಲಿಂಗವ ಕಡೆಗಣಿಸಿ ಅನ್ಯದೈವಕ್ಕೆ ಅಲೆದಾಡುವುದು 'ಹಾಲ ಹಿಡಿದು ಬೆಣ್ಣೆಯನರಿಸುವಂತೆ' ಹಾಸ್ಯಾಸ್ಪದವಾದುದು. ಅನುಭಾವದ ಹಸಿವು ಅನುಭವ ವೇದ್ಯ ಮಾತ್ರ ಎನ್ನುವುದು, 'ಬಂಜೆ ಬೇನೆಯನರಿಯಳು ಬಲದಾಯಿ ಮುದ್ದು ಬಲ್ಲಳೇ' ಎನ್ನುವ ಮಾತಿನಲ್ಲಿ ಸ್ಫುಟಗೊಂಡಿದೆ. ಅನುಭಾವಿಗಳ ಒಡನಾಟವು, 'ಕತ್ತಲೆ ಪಾಳೆಯವ ರವಿ ಹೊಕ್ಕಂತಾಯಿತ್ತು !' ಇತ್ಯಾದಿ ಅನೇಕ ಅರ್ಥಭರಿತ ಸೂತ್ರೋಕ್ತಿ. ಅನುಭವೋಕ್ತಿಗಳ ಮೂಲಕ ಜೀವನಾನುಭವವನ್ನು ಕೆನೆಗಟ್ಟಿಸಿರುವಲ್ಲಿ ಮಹಾದೇವಿಯಕ್ಕನ ಕಾವ್ಯಕಲೆ-ಜೀವನದರ್ಶನದ ಸತ್ವಸಾರವಿದೆ.

(ಮುಂದುವರೆಯುತ್ತದೆ....)







## ಲೇಖನ

# ಶರಣರ ದಾಸೋಹ ಪರಿಕಲ್ಪನೆ

– ಸಿದ್ಧರಾಜ ಪೂಜಾರಿ

ಶರಣರ ದಾಸೋಹದ ಪರಿಕಲ್ಪನೆ ಬಯಲಿನಷ್ಟು ವಿಸ್ತಾರವಾದುದು. ಸಕಲ ಜೀವಾತ್ಮರಿಗೆ ತನ್ನನ್ನು ಅರ್ಪಿಸಿಕೊಳ್ಳುವ ಭೃತ್ಯಾಚಾರವದು. ಪರಿಶುದ್ಧ ಕಾಯಕದಿಂದ ಪಡೆದುದನ್ನು ಸಹಜಭಾವದೊಂದಿಗೆ ನೀಡುವುದು ದಾಸೋಹವೆನಿಸಿಕೊಳ್ಳುತ್ತದೆ. ದಾಸೋಹವೆಂದರೆ ದಾನವಲ್ಲ. ದಾನ ಮಾಡಲು ಈ ಇಹದಲ್ಲಿ ತನ್ನದಾದುದು ಏನೂ ಇಲ್ಲ. ಇಲ್ಲಿರುವುದೆಲ್ಲವೂ ಭಗವಂತನ ಕರುಣೆ, ದುಡಿಮೆಯ ಪ್ರತಿಫಲ ಕೂಡ ಪರಶಿವನ ಕರುಣೆ ಎಂದು ಭಾವಿಸಿ, ದೊರಕಿದ್ದನ್ನು ನಾಳೆಗೆಂದು ಸಂಗ್ರಹಿಸಿ ಇಟ್ಟುಕೊಳ್ಳದೇ ಗುರುಲಿಂಗ ಜಂಗಮಕ್ಕೆ ಸಮರ್ಪಿಸುವುದು. ಹಾಗೆ ಅರ್ಪಿತವಾಗುವುದು ಪ್ರಸಾದ ಸಿದ್ಧಿ ಎನಿಸಿಕೊಳ್ಳುತ್ತದೆ.

ದಾಸೋಹವೆಂದರೆ ಇನ್ನೊಬ್ಬರಿಗೆ ಕೊಡುವ ಮೂಲಕ ತನಗೆ ತಾನೇ ಕೊಟ್ಟುಕೊಳ್ಳುವುದು. ಕೆರೆಯ ನೀರನ್ನು ಕೆರೆಗೆ ಚೆಲ್ಲುವ ಪರಿಯು ಕೃತಾರ್ಥ ಭಾವವದು. 'ಸೋಹಂ' ಇದು ವ್ಯಕ್ತಿ ನಿಷ್ಠವಾದುದು. 'ದಾಸೋಹ' ಸಮಾಜ ನಿಷ್ಠವಾದುದು. ಸಮಾಜವೆಂದರೆ ತನ್ನ ಸುತ್ತಲೂ ಇರುವ ಒಂದು ವ್ಯವಸ್ಥೆ. ತನ್ನ ನಾಡಿನ, ತನ್ನ ದೇಶದ ವ್ಯವಸ್ಥೆ, ಅಷ್ಟೇ ಏಕೆ ಅದು ಒಟ್ಟು ನಾಗರಿಕತೆಯ ವ್ಯವಸ್ಥೆ. ವೀರಶೈವವೆಂದರೆ ಇಷ್ಟು ವಿಸ್ತಾರವಾದ ವ್ಯವಸ್ಥೆ. ತಾನು ಈ ಇಂಥ ವ್ಯವಸ್ಥೆಯ ಒಂದು ಅಂಗ ಎಂಬ ಪ್ರಜ್ಞೆ ಉಳಿಸಿಕೊಂಡವನೇ ಶಿವಶರಣ. ದಾಸೋಹ ಕ್ರಿಯೆ ವ್ಯಷ್ಟಿ-ಸಮಷ್ಟಿ ಭಾವವನ್ನು ಸಂಯೋಗಗೊಳಿಸುತ್ತದೆ.

ಪ್ರಸಾದ ಸಿದ್ಧಿಯಾಗದ ಸಂಪತ್ತು ಭಯದ ಮೂಲವಾಗುತ್ತದೆ. ಅಂದರೆ ತನಗಾಗಿ, ತನ್ನ ಮಡದಿ ಮಕ್ಕಳಿಗಾಗಿ ಕೂಡಿಡುವುದು ಚಿಂತೆಗೆ ಕಾರಣವಾಗುತ್ತದೆ. ಅದನ್ನೇ ಗುರುಲಿಂಗ ಜಂಗಮಕ್ಕೆ ಮುಡಿಪಾಗಿಸಿ ಪರಸ್ಪರ ಹಂಚಿಕೊಳ್ಳುವಾಗ ಮನಸ್ಸು ನಿಶ್ಚಿಂತವಾಗುತ್ತದೆ, ನಿರಾಳವಾಗುತ್ತದೆ. 'ಕಾಗೆಯೊಂದಗಳ ಕಂಡರೆ ಕೂಗಿ ಕರೆಯದೆ ತನ್ನ ಬಳಗವನು.' ಅದು ಪಕ್ಷಿ ಸಂಕುಲದ ದಾಸೋಹ. ಶರಣರು ಕಣ್ಣು, ಮನಸ್ಸು ತೆರೆದಿಟ್ಟುಕೊಂಡು ತಮ್ಮ ಸುತ್ತಲಿನ ಪ್ರಕೃತಿಯಿಂದ ಪಡೆದುಕೊಂಡ ಅನುಭವ ಅದು. ಸುರಿವ ಮಳೆ, ಹರಿವ ನದಿ, ಧರೆಯ ಬೆಳೆ, ಬೀಸುವಗಾಳಿ, ಹರಡಿದ ಬೆಳಕು ಎಲ್ಲವೂ ದಾಸೋಹ ಕ್ರಿಯೆಗೆ ಮಾದರಿ ಅಲ್ಲವೆ?

ದಾಸೋಹವನ್ನು ಅರ್ಥಮಾಡಿಕೊಳ್ಳಲು ಒಂದು ಮರ ಸಾಕು. ಧರೆಯ ಸತ್ವವನ್ನು ಹೀರಿ ಬೆಳೆದ ಮರದ ಬದುಕು ಹೇಗಿದೆ ಎಂಬಂತೆ ಅನುಭವಿಸಬೇಕು. ಅಂದರೆ ಮರವೇ ನಾವಾಗಬೇಕು. ಆಗ ನಮಗೆಲ್ಲ ಹೊಳೆಯುತ್ತದೆ. ಮರ ತಾನು ಕಡುಬಿಸಿಲಲ್ಲಿ ನಿಂತು ದಣಿದವರಿಗೆ ನೆರಳು ಹಾಸುತ್ತದೆ, ಬಿಸಿ ಗಾಳಿಯನ್ನು ತಂಪಾಗಿಸಿ ತನ್ನ ಅತಿಥಿಯ ಮೈ ತೀಡುವಂತೆ ಮಾಡುತ್ತದೆ. ಆಗಾಗ ಮೈತುಂಬ ಹೂವು ಧರಿಸಿ ಕಣ್ಣಿಗೆ ಮುದ ನೀಡುತ್ತದೆ. ಪರಿಮಳ ಬೀರುತ್ತದೆ. ಕೊನೆಗೆ ಹಣ್ಣು ಧರಿಸಿ ಕಲ್ಲೆಸೆದವರಿಗೂ ಕೊಡುತ್ತದೆ. ಆಯುಷ್ಯ ತೀರಿದೊಡನೆ ಕಡಿದರೆ ಕಟ್ಟಿಗೆಯಾಗಿ ತನ್ನನ್ನೇ ಸುಟ್ಟುಕೊಳ್ಳುತ್ತದೆ. ಅದರ ಹುಟ್ಟು ಬದುಕು ಸಾವು ಎಲ್ಲವೂ ಪರರ ಸೇವೆಗಾಗಿ; ಬರೀ ಕೊಡುವುದಕ್ಕಾಗಿ! ಕೊಟ್ಟಿರುವೆ ಎಂಬ ಅರಿವು ಅದಕ್ಕಿರುವುದಿಲ್ಲ. ಎಂಥ ಸಾರ್ಥಕ ಬದುಕು! ದಾಸೋಹ ಹಾಗಿರಬೇಕು, ಶರಣರ ದಾಸೋಹದ ಪರಿಕಲ್ಪನೆ ಹಾಗಿದೆ.

ಇನ್ನು ತ್ರಿವಿಧ ದಾಸೋಹ ಗುರು ಲಿಂಗ ಜಂಗಮಕ್ಕೆ ತನು ಮನ ಧನ ಸಮರ್ಪಿಸುವುದು ಎಂದರ್ಥ. ಗುರುವಿಗೆ ತನುವನ್ನು ಅರ್ಪಿಸಿಕೊಳ್ಳುವುದೆಂದರೆ ಗುರುಸೇವೆ ಮಾಡುವುದು. ಲಿಂಗಕ್ಕೆ ಮನಃ ಅರ್ಪಿಸುವುದೇ ಲಿಂಗಪೂಜೆ. ಜಂಗಮಕ್ಕೆ ಧನ ಅರ್ಪಿಸುವುದೇ ಜಂಗಮ ದಾಸೋಹ.

ವೀರಶೈವ ತತ್ತ್ವಗಳನ್ನು ಅಥವಾ ಮೌಲ್ಯಗಳನ್ನು ತನ್ನ ಬದುಕಿನಲ್ಲಿ ಅಳವಡಿಸಿಕೊಂಡು ಆಚರಿಸುವವನೇ ಜಂಗಮ. ಇಂಥ ವ್ಯಕ್ತಿಗಳ ಸಮುದಾಯ ಕೂಡ ಜಂಗಮ ಎನಿಸಿಕೊಳ್ಳುತ್ತದೆ. ವೀರಶೈವ ಸಮುದಾಯ ಅಂದರೆ ಸಮಾಜ. "ಜಗವಿದೆಲ್ಲವೂ ಜಂಗಮ" ಎನ್ನುವಲ್ಲಿ ವಿಶ್ವವ್ಯಾಪಿಯಾಗುತ್ತದೆ. ಅಂದರೆ ವಿಶ್ವ ಸಮುದಾಯ ಅಂದರೆ ಸಮಾಜದ ವ್ಯಾಪ್ತಿ ಭಾವಿಸಿದಂತೆ ಜಂಗಮವೆಂದರೆ ಬರೀ ಓರ್ವ ಸ್ವಾಮಿಯಲ್ಲ – ಧನವನ್ನು ಓರ್ವ ವ್ಯಕ್ತಿಗೆ ಅರ್ಪಿಸುವುದು ದಾಸೋಹವಲ್ಲ, ಸಮಾಜಕ್ಕೆ ಅರ್ಪಿಸುವುದು ದಾಸೋಹ. ವಿಶ್ವ ಸಮುದಾಯವೆಲ್ಲವೂ ಜಂಗಮವೇ! ನಾವು







ಡಾ. ಆರ್.ಸಿ. ಹಿರೇಮಠ ಬರೆಯುತ್ತಾರೆ "ಕಾಯಕದ ಪ್ರತಿಫಲವನ್ನು ದಾಸೋಹದ ಮೂಲಕ ಸಮಾಜಕ್ಕೆ ಹಂಚುವ ಹೊಸ ಆರ್ಥಿಕ ತಂತ್ರವನ್ನು ಬಸವಾದಿ ಪ್ರಮಥರು ಕಂಡುಹಿಡಿದರು" ಎಂದು ಶತಮಾನಗಳ ಹಿಂದೆ ಕಂಡುಕೊಂಡ ಈ ಆರ್ಥಿಕ ವ್ಯವಸ್ಥೆ ಇದು ಕೂಡಿಡುವುದು ಎಂದರೆ ಇನ್ನೊಬ್ಬರ ತುತ್ತನ್ನು ಕಸಿದುಕೊಳ್ಳುವುದು ಎಂಬ ಅರಿವು ಶಿವಶರಣರಿಗಿತ್ತು. ಕೂಡಿಟ್ಟ ಹಣದಿಂದಲೇ ಹಣದುಬ್ಬರ ಹೆಚ್ಚುತ್ತ ಹೋಗಿ ಆರ್ಥಿಕ ವ್ಯವಸ್ಥೆ ಬುಡಮೇಲಾಗುತ್ತದೆ. ಆಧುನಿಕ ಅರ್ಥಶಾಸ್ತ್ರಜ್ಞರ 'ಆರ್ಥಿಕ ಸಿದ್ಧಾಂತ'ಗಳ ಗೊಂದಲ ದಾಸೋಹಕ್ಕಿಲ್ಲ. ಅದೊಂದು ಸರಳ ಸಾತ್ವಿಕ ಕ್ರಿಯೆ. ಎಲ್ಲವನ್ನೂ ಸಮಾಜಕ್ಕೆ ಅರ್ಪಿಸಿ ತನ್ಮೂಲಕ ತಾನೂ ಪಡೆದುಕೊಳ್ಳುವುದು. ಏಕೆಂದರೆ ಮನುಷ್ಯ ತನ್ನಷ್ಟಕ್ಕೆ ತಾನು ಸರ್ವಸ್ವತಂತ್ರವಾಗಿ ಬದುಕುವುದು ಅಸಾಧ್ಯ.

ಬಸವಣ್ಣನವರು ಪ್ರತಿಪಾದಿಸಿದ 'ದಾಸೋಹ'ದ ಅರ್ಥವನ್ನು ಕವಿ ಬ.ಗಿ. ಯಲ್ಲಟ್ಟಿ ಸುಂದರವಾಗಿ ಸಂಗ್ರಹಿಸಿದ್ದಾರೆ. "ಸಮಾಜದ ಪೋಷಣೆಗೆಂದು ನೀಡುವುದೇ ದಾಸೋಹ, ಅಂಥ ಪೋಷಣೆಯ ಕಾರ್ಯದಲ್ಲಿ ನಿರತನಾದವನಿಗೆ 'ತಾನು ಸಮಾಜದ ಸೇವಕ'ನೆಂಬ ಭಾವನೆ ಇರಬೇಕಲ್ಲದೆ ಅಹಮಿಕೆ ಇರಕೂಡದು. ಮನುಷ್ಯ ತನ್ನ ದುಡಿಮೆಯಿಂದಷ್ಟೇ ಬದುಕುತ್ತಾನೆ ಎನ್ನುವುದು ತಪ್ಪು. ದೇಶವಾಸಿಗಳು ಕೊಟ್ಟರೆ ದೇಶವಾಗುತ್ತದೆ, ಕಟ್ಟಿದರೆ ದೇಶವಾಗುತ್ತದೆ, ಕೂಡಿ ರಚಿಸಿದರೆ ಸಮಾಜವಾಗುತ್ತದೆ. ಎಲ್ಲರೂ ಮನ್ನಿಸಿದರೆ ಸಮಾಜವೆನಿಸುತ್ತದೆ. ಹಾಗೆಯೇ ದೇಶವು ರಕ್ಷಣೆ ನೀಡಿದರೆ ದೇಶವಾಸಿ ಹಾಯಾಗಿ ಬದುಕುತ್ತಾನೆ. ಸಮಾಜವು ಆಶ್ರಯ ನೀಡಿದರೆ ಸಾಮಾಜಿಕ ನೆಮ್ಮದಿಯಿಂದ ಬದುಕುತ್ತಾನೆ. ಆದ್ದರಿಂದ ಕೊಡುವುದು ಬೇರೆ ಯಾರಿಗೂ ಅಲ್ಲ. ಒಂದಿಲ್ಲೊಂದು ರೀತಿ ಸಮಾಜಕ್ಕೆ ಹಾಗೂ ದೇಶಕ್ಕೆ. ಹೀಗೆ ತನ್ನ ಹಿತರಕ್ಷಣೆಗಾಗಿ ತನಗೆ ತಾನೇ ಕೊಟ್ಟುಕೊಳುವ ಮರ್ಮ ದಾಸೋಹದಲ್ಲಿದೆ ಹಾಗೂ ಸಮಷ್ಟಿಯ ಋಣವನ್ನು ವ್ಯಷ್ಟಿ ತೀರಿಸುವ ಅರಿವೂ ದಾಸೋಹದಲ್ಲಿದೆ."

ಹೀಗೆ ಆರ್ಥಿಕ ಅಭದ್ರತೆ ಏರಿಳಿತಕ್ಕೆ ಕಾರಣವಾಗಿ ಮೇಲು ಕೀಳೆಂಬ ಭಾವನೆ ಮೂಡುತ್ತದೆ. ದಾಸೋಹ ತತ್ತ್ವ ಸಮಾನತೆಯ ಅರ್ಥವನ್ನು ಬಿಡಿಸಿ ತೋರಿಸುತ್ತದೆ. ದಾಸೋಹ ಕ್ರಿಯೆಯಲ್ಲಿ ಪ್ರೀತಿ, ಸ್ನೇಹ, ಅನುಕಂಪ, ದಯೆ, ವಿನಯ ಮುಂತಾದ ಮಾನವೀಯ ಸದ್ಗುಣಗಳ ಸ್ಥಿತಪ್ರಜ್ಞ ಚಲನೆಯಿದೆ. ಅಂತೆಯೇ ಜಂಗಮ ದಾಸೋಹ ಎನ್ನುವುದು ವೀರಶೈವರ ಮಹಾಮೌಲ್ಯವಾಗಿದೆ.

ಗಾಂಧೀಜಿಯವರ ಮಾತು ನೆನಪಾಗುತ್ತದೆ. "ಜಗತ್ತಿನಲ್ಲಿ ಯಾರಾದರೂ ಹಸಿವೆಯಿಂದ ಬಳಲಿ ಸಾಯುವಂತಾದರೆ ಅದಕ್ಕೆಲ್ಲ ನಾನು ಮೊದಲ ಅಪರಾಧಿಯಾಗುತ್ತೇನೆ. ವಿಶ್ವದ ಒಟ್ಟು ನಾಗರಿಕತೆಯ ಅಂಗವಾದ ನಾನು ಆ ಅಪರಾಧವನ್ನು ಸ್ವೀಕರಿಸಲೇಬೇಕು."

ಭಗವಂತನೆದುರು ಬೇಕು ಎಂದು ಬೇಡುವ ಹಸ್ತಗಳು ಕೋಟಿ ಕೋಟಿ. ಇಷ್ಟೆಲ್ಲ ಕೊಟ್ಟಿರುವೆ, ಇನ್ನು ಸಾಕು ಎನ್ನುವವರ ಸಂಖ್ಯೆ ತೀರ ಕಡಿಮೆ. ದಾಸೋಹ ನಿರತ ವ್ಯಕ್ತಿ ಈ ಬೇಕು ಬೇಡಗಳ ಭವದ ಬಾಧೆಯಿಂದ ವಿಮುಕ್ತನಾಗಿರುತ್ತಾನೆ. ಸತ್ಯ ನಿಷ್ಠ ಕಾಯಕದಲ್ಲಿ ಮೈಮರೆತ ವ್ಯಕ್ತಿಗೆ ಗಳಿಸುವ ಹಂಬಲವಿಲ್ಲ. ಅಹಮಿಕೆ ಇಲ್ಲ. ತನಗೆ ದೊರಕಿದ್ದೆಲ್ಲವೂ ತ್ರಿವಿಧ ದಾಸೋಹಕ್ಕೆ ಮೀಸಲು, ಕೊಟ್ಟದ್ದು ತನಗೇ ಎಂಬ ಅರಿವು. ಏಕೆಂದರೆ –

**ಮಾಡಿದೆನೆಂಬುದು ಮನದಲ್ಲಿ ಹೊಳೆದರೆ**
**ಏಡಿಸಿ ಕಾಡಿತ್ತು ಶಿವನ ಡಂಗುರ**
**ಮಾಡಿದೆನೆನ್ನದಿರಾ ಲಿಂಗಕ್ಕೆ**
**ಮಾಡಿದೆನೆನ್ನದಿರಾ ಜಂಗಮಕ್ಕೆ**
**ಮಾಡಿದೆನೆಂಬುದು ಮನದಲ್ಲಿಲ್ಲದಿದ್ದರೆ**
**ಬೇಡಿದ್ದ ನೀವ ಕೂಡಲಸಂಗಮದೇವ.**

ತ್ರಿವಿಧ ದಾಸೋಹದಿಂದ ದೊರಕುವ ಬಹುದೊಡ್ಡ ಫಲವೆಂದರೆ ಪ್ರಸಾದ ಸಿದ್ಧಿ. ವೀರಶೈವ ಶರಣರು ಬಯಸುವುದು ಇಷ್ಟನ್ನೆ! ಏಕೆಂದರೆ ಜಂಗಮ ದಾಸೋಹ ನಡೆಸದವನು ಎಂದಿಗೂ ವೀರಶೈವನಾಗಲಾರ.

ಜನ್ಮ ಜನ್ಮಕ್ಕೆ ಹೋಗಲೀಯದೆ, 'ಸೋಹಂ' ಎಂದೆನಿಸದೆ 'ದಾಸೋಹಂ' ಎಂದೆನಿಸಯ್ಯಾ ಲಿಂಗ ಜಂಗಮದ ಪ್ರಸಾದವ ತೋರಿ ಬದುಕಿಸಯ್ಯಾ ಕೂಡಲ ಸಂಗಮದೇವಾ.

ಇದು ಪ್ರತಿಯೊಬ್ಬ ವೀರಶೈವನ ಹಂಬಲವಾಗಿದೆ. ಇದರಲ್ಲಿ ಕೊಡುವ – ಪಡೆಯುವ ಉಭಯ ಭಾವ ಸೂತಕಗಳಿಲ್ಲ. ಅದೇನಿದ್ದರೂ ದಾಸೋಹವಿಲ್ಲದ ಬದುಕು ಬದುಕಲ್ಲ ಎಂಬುದನ್ನು ಶಿವಶರಣರು ಕಂಡುಕೊಂಡ ದರ್ಶನವಾಗಿದೆ. ಕೊಡದವನ ಬಾಳು ಹಾಳು ಎಂಬುದು ದಾಸೋಹದ ಸೂಳ್ನುಡಿಯಾಗುತ್ತದೆ.







**ಆಡಿದಡೇನು, ಹಾಡಿದಡೇನು, ಓದಿದಡೇನು,**
**ತ್ರಿವಿಧ ದಾಸೋಹವಿಲ್ಲದನ್ನಕ್ಕ ?**
**ಆಡದೆ ನವಿಲು? ಹಾಡದೆ ತಂತಿ? ಓದದೆ ಗಿಳಿ?**
**ಭಕ್ತಿಯಿಲ್ಲದವರನೊಲ್ಲ ಕೂಡಲ ಸಂಗಮದೇವ.**

ದಾಸೋಹ ಒಂದು ಕೃತಕ ಕ್ರಿಯೆಯಲ್ಲ. ಅದು ಭಕ್ತಿ, ಶ್ರದ್ಧೆ, ಕಿಂಕರ ಭಾವವನ್ನು ಅಪೇಕ್ಷಿಸುತ್ತದೆ. ಜಂಗಮ ದಾಸೋಹ ಸಮಾಜದ ಉನ್ನತಿ ಬಯಸುತ್ತಲೇ ಅತ್ಮೋನ್ನತಿಯ ಪಾಠವನ್ನೂ ಹೇಳಿಕೊಡುತ್ತದೆ. ದಾಸೋಹ ಒಂದು ಬಾಹ್ಯ ಕ್ರಿಯೆಯಲ್ಲ. ಅದು ಶರಣರ ಬದುಕಿನಲ್ಲಿ ಲೀನವಾದ ಕ್ರಿಯೆ.

ಡಾ. ಎಂ.ಎಂ. ಕಲಬುರ್ಗಿಯವರು ದಾಸೋಹದ ಅರ್ಥವನ್ನು ತುಂಬ ಚೆನ್ನಾಗಿ ವಿವರಿಸಿದ್ದಾರೆ. "ದಾಸೋಹ ವರ್ಗ-ವರ್ಣ ರಹಿತವಾಗಿ ಭಕ್ತ ಸಮಾಜ (ಜಂಗಮ)ದಲ್ಲಿ ಮುಕ್ತವಾಗಿ ನಡೆಯುವ ವಿನಿಮಯ ಕ್ರಿಯೆಯಾಗಿದೆ. ಇದರಿಂದ ಪುರೋಹಿತರಿಗೆ ಮಾತ್ರ ನೀಡುವುದರ ಮೂಲಕ ದೇವರನ್ನು ತೃಪ್ತಿಪಡಿಸಬೇಕೆಂಬ ಭಾವ ನಿಂತು ಪ್ರಜೆಗಳಿಗೆ ನೀಡುವುದರ ಮೂಲಕ ದೇವರನ್ನು ತೃಪ್ತಿಪಡಿಸುವ ಹೊಸ ತತ್ತ್ವ ತೆರೆದುಕೊಂಡಿತು. ಲಿಂಗದ ಮುಖ 'ಜಂಗಮ' ಎಂದರೆ 'ಸಮಾಜ'ವೆಂಬ ಪ್ರಗತಿಪರ ವೀರಶೈವವಾದ ಬೆಳೆಯಿತು." ಈ ಅರ್ಥದಲ್ಲಿ ದಾಸೋಹ ಒಂದು ಜನಪರ ತತ್ತ್ವವಾಗಿದೆ.

ಒಟ್ಟಿನಲ್ಲಿ ದಾಸೋಹ ಪರಿಕಲ್ಪನೆ ಶರಣರು ಹುಟ್ಟು ಹಾಕಿದ ಒಂದು ಮಾನವೀಯ ಸದ್ಗುಣವಾಗಿದೆ. "ಇಳೆ ನಿಮ್ಮದಾನ ಬೆಳೆ, ನಿಮ್ಮ ದಾನ, ಸುಳಿದು ಸೂಸುವ ಗಾಳಿ ನಿಮ್ಮ ದಾನ" ಎಂಬ ಸತ್ಯದ ಅರಿವನ್ನು ಜಾಗೃತವಾಗಿರಿಸಿಕೊಂಡು ದಾಸೋಹ ಕ್ರಿಯೆಯಲ್ಲಿ ತೊಡಗಬೇಕಾಗುತ್ತದೆ. ದಾಸೋಹವೆಂದರೆ ಬರೀ ಸಂಪತ್ತನ್ನು ಹಂಚಿಕೊಳ್ಳುವುದಲ್ಲ. ಬಡತನವನ್ನು ಕೂಡ ಹಂಚಿಕೊಳ್ಳುವುದು.

ಪತ್ರಿಕೆಯಲ್ಲಿ ಓದುತ್ತೇವೆ. ಹಸಿದ ಮಕ್ಕಳ ಬವಣೆ ನೋಡಲಾಗದೆ, ಅವರಿಗೆ ತುತ್ತು ಅನ್ನ ಹಾಕಲು ಅಸಮರ್ಥಳಾದ ತಾಯಿ, ಆ ಮಕ್ಕಳನ್ನು ಬಾವಿಗೆಸೆದು ತಾನೂ ಹಾರಿ ಸತ್ತಳಂತೆ. ಹಸಿವೆಯಿಂದ ಬಳಲಿದ ಆ ತಾಯಿ ಮಕ್ಕಳನ್ನು ಕಣ್ಣು ತೆರೆದು ನೋಡಲಾಗದ ನೆರೆಹೊರೆ, ಸಮಾಜ, ಸರಕಾರ ಅಥವಾ ಪ್ರತಿ ವ್ಯಕ್ತಿಯೂ ಇಲ್ಲಿ ನಾಚಿಕೆಯಿಂದ ತಲೆ ತಗ್ಗಿಸಬೇಕಾಗುತ್ತದೆ. ಇಂಥ ಘಟನೆಗಳು ಸಂಭವಿಸುವ ವ್ಯವಸ್ಥೆಯಲ್ಲಿ ನಾಗರಿಕ ಮನಸ್ಸು ನಾಶವಾಗಿರುತ್ತದೆ. ಅಂಥ ವ್ಯವಸ್ಥೆಗೆ ದಾಸೋಹದ ಮಹತ್ವ ತಿಳಿದಿರಲಾರದು. ದಾಸೋಹದ ಬೆಲೆ ಅರಿಯದ ಸಮಾಜ ಸರ್ವವಿಧವಾಗಿ ಶಿಥಿಲಗೊಂಡಿರುತ್ತದೆ.

ಈ ಸಮಾಜ, ದೇಶ, ತನಗೇನು ಕೊಟ್ಟಿದೆ ಎಂದು ವಿಚಾರಿಸುವುದು ದಾಸೋಹವಲ್ಲ. ಅವುಗಳಿಗೆ ತನ್ನ ಕೊಡುಗೆ ಏನು ಎಂಬ ಪ್ರಶ್ನೆಯನ್ನು ಪದೇ ಪದೇ ಕೇಳಿಕೊಳ್ಳುವುದು, ಅದಕ್ಕಾಗಿ ಹಾತೊರೆಯುವುದು. ಸೇವೆ ಗೈಯಲು ತಕ್ಷಣ ಸಿದ್ಧವಾಗಿ ಕಾರ್ಯತತ್ಪರವಾದಲ್ಲಿ ದಾಸೋಹ ಭಾವ ಮೈಮನ ತುಂಬಿಕೊಳ್ಳುತ್ತದೆ.

ನಿಜವಾದ ಶಿವಶರಣರು ಇಂಥ ಒಂದು ಪ್ರಬುದ್ಧವಾದ ಕಾಯಕತತ್ತ್ವದಲ್ಲಿ ತಮ್ಮನ್ನು ಒಂದಾಗಿಸಿ ಕೊಳ್ಳುತ್ತಾರೆ.

**ಅಯ್ಯಾ ನಿಮ್ಮ ಶರಣರ ದಾಸೋಹಕ್ಕೆ**
**ಎನ್ನ ತನುಮನಧನ ವಲಸದಂತೆ ಮಾಡಯ್ಯಾ**
**ತನು ದಾಸೋಹಕ್ಕೆ ಉಬ್ಬುವಂತೆ ಮಾಡು**
**ಮನ ದಾಸೋಹಕ್ಕೆಲೀಯವಹಂತೆ ಮಾಡು**
**ಧನ ದಾಸೋಹಕ್ಕೆಸವೆದು, ನಿಮ್ಮ ಶರಣರ ಪ್ರಸಾದದಲ್ಲಿ**
**ನಿರಂತರ ಆಡಿ, ಹಾಡಿ, ನೋಡಿ, ಕೂಡಿ,**
**ಭಾವಿಸಿ, ಸುಖಿಸಿ,**
**ಪರಿಣಾಮಿಸುವಂತೆ ಮಾಡು, ಕೂಡಲಸಂಗಮದೇವಾ.**

ಶರಣರ ದಾಸೋಹದ ಪರಿಕಲ್ಪನೆಯ ಸಾರ ಈ ವಚನದಲ್ಲಿದೆ. ಪರಸ್ಪರ ಆಡಿ, ಹಾಡಿ, ಕೂಡಿ, ನೋಡಿ, ಭಾವಿಸಿ, ಸುಖಿಸಿ, ಪರಿಣಾಮಿಸುವ ಹಂಬಲವುಳ್ಳವರು ದಾಸೋಹ ಕ್ರಿಯೆಯಲ್ಲಿ ನಿರತರಾಗಬೇಕಾಗುತ್ತದೆ.

ಈ ರೀತಿ ದಾಸೋಹ ಎನ್ನುವುದು ಶರಣರ ಉದಾತ್ತ ಆಶಯಗಳ ಪರಿಕಲ್ಪನೆಯಾಗಿದೆ. ಭಕ್ತರಿಗೆ ನೋವಾದರೆ ಪರಶಿವ ನೊಂದುಕೊಳ್ಳುವನಂತೆ. ದಾಸೋಹಿಯಾದವನು ಎಲ್ಲರ ಸಂಕಟಗಳಿಗೆ ಸ್ಪಂದಿಸುತ್ತಾನೆ. ದಾಸೋಹ ಸಕಲ ಪ್ರಜೆಗಳ ಬವಣೆಗಳಿಗೆ ಒಂದು ಪರಿಹಾರ ಸೂತ್ರವಾಗಿದೆ.







ಪರಿಚಯ

# ಅಪರೂಪದ ಕನ್ನಡ ಶಿವಯೋಗಿ : ಅಲ್ಲಮಪ್ರಭು ಮಹಾಸ್ವಾಮಿಗಳು

– ಡಾ. ರಾಜಶೇಖರ ಇಚ್ಚಂಗಿ, ಹುಕ್ಕೇರಿ



ನಾನು ಕರ್ನಾಟಕದ ಅನೇಕ ಮಠಗಳನ್ನು ನೋಡಿದ್ದೇನೆ. ಆದರೆ ಕನ್ನಡಪರ ಕೆಲಸ ಮಾಡುವ, ರಚನಾತ್ಮಕ ಯೋಜನೆ ಹಾಕಿಕೊಂಡಿರುವ, ಅಲ್ಪ ವೇಳೆಯಲ್ಲಿ ರಾಜ್ಯದ ಕನ್ನಡದ ಶ್ರೇಷ್ಠ ಸಾಹಿತಿಗಳ ಗಮನ ಸೆಳೆದಿರುವ ಸುಮಾರು ಐವತ್ತಕ್ಕಿಂತ ಹೆಚ್ಚು ಕನ್ನಡಪರ ಗ್ರಂಥಗಳ ಸಮರ್ಪಣೆ ಮಾಡಿರುವ ಕೆಲವೇ ಕೆಲವು ಮಠಗಳಲ್ಲಿ ಚಿಂಚಣಿಯ ಅಲ್ಲಮಪ್ರಭು ಸಿದ್ಧಸಂಸ್ಥಾನ ಮಠವು ಒಂದು, ಕೆಲವೇ ಕೆಲವು ಸ್ವಾಮಿಗಳಲ್ಲಿ ಪೂಜ್ಯ ಶ್ರೀ ಮ.ನಿ.ಪ್ರ.ಸ್ವ ಅಲ್ಲಮಪ್ರಭು ಸ್ವಾಮೀಜಿಯವರು ಒಬ್ಬರೆಂದು ಹೇಳಲು ಅಭಿಮಾನ ಮತ್ತು ಹೆಮ್ಮೆ ಎನಿಸುತ್ತದೆ. ಗಡಿನಾಡಿನ ಚಿಂಚಣಿಯ ಶ್ರೀ ಮಠವು ಅಲ್ಲಮಪ್ರಭು ಸಂಪ್ರದಾಯಕ್ಕೆ ಸೇರಿದ ಮತ್ತು ಬಸವತತ್ವ ಪರಂಪರೆಯ ಒಂದು ಭವ್ಯ ಪೀಠವಾಗಿದೆ.

"ಜಾತಿಗೆ ಒಂದು ಮಠ, ಮಠಕ್ಕೊಂದು ಪೀಠ, ಪೀಠಕ್ಕೊಬ್ಬ ಸ್ವಾಮೀಜಿ" ಎಂಬ ಸರಳ ಸೂತ್ರ ಅಪಾಯದ ಎಲ್ಲೆ ಮೀರಿ, ಸಾಮಾಜಿಕ ದುರಂತಕ್ಕೆ ಕಾರಣವಾಗುವ ಸ್ಥಿತಿಯಲ್ಲಿದೆ. ರಾಜಕಾರಣಿಗಳಂತೆ ಅಗ್ಗದ ಜನಪ್ರಿಯತೆಯಡೆ ಜಾರುತ್ತಿರುವ ಸ್ವಾಮಿಗಳಲ್ಲಿ ಕನ್ನಡ ಕಾಯಕದ ಮೂಲಕ ಚಿಂಚಣಿಯ ಸಿದ್ಧಸಂಸ್ಥಾನ ಮಠವನ್ನು ಕನ್ನಡದ ಧರ್ಮಪೀಠವನ್ನಾಗಿ ಪರಿವರ್ತಿಸಿದ ಅಪರೂಪದ ಕನ್ನಡ ಯೋಗಿ ಶ್ರೀ ಶ್ರೀ ಅಲ್ಲಮಪ್ರಭು ಮಹಾಸ್ವಾಮಿಗಳು. ಕನ್ನಡ ವಿವೇಕವನ್ನ ಸೀಮಾತೀತ ವಿಸ್ತರಿಸುವ ಅವರ ಸಾಹಸ ಮೆಚ್ಚುವಂತಹದ್ದು. ಮನದಲ್ಲಿ ಬಸವಣ್ಣ, ಉಸಿರಿನಲ್ಲಿ ಕನ್ನಡ ತುಂಬಿಕೊಂಡ ಚಿಂಚಣಿ ಮಹಾಸ್ವಾಮಿಗಳು ನಿರಂತರ ಪರಿಶ್ರಮದಿಂದ ಕರ್ನಾಟಕದ ಉತ್ತರ ಗಡಿಯಲ್ಲಿ ಕನ್ನಡದ ಕಹಳೆ ಊದುತ್ತಿದ್ದಾರೆ.

ಚಿಂಚಣಿ ಚಿಕ್ಕೋಡಿ ತಾಲ್ಲೂಕಿನ ಒಂದು ಪುಟ್ಟಹಳ್ಳಿ. ಪೂರ್ವಕ್ಕೆ ಚಿಕ್ಕೋಡಿ, ಪಶ್ಚಿಮಕ್ಕೆ ನಿಪ್ಪಾಣಿ, ನಿಪ್ಪಾಣಿ ಎಂದೊಡನೆ ತಂಬಾಕಿನ ಘಾಟು ವಾಸನೆಯೊಂದಿಗೆ ಭಾಷಾ ಕಲಹದ ಒಂದಿಷ್ಟು ಕಮಟು ಮೂಗಿಗೆ ಬಡಿಯುವುದು ಸಹಜ. ಆದರೆ ಕರ್ನಾಟಕದ ಉತ್ತರದ ಗಡಿ ಅಂಚಿನಲ್ಲಿ ಭಾಷೆಯ ವೈಷಮ್ಯ ಬೆಳೆಯಿಸಿ ತನ್ಮೂಲಕ ತಮ್ಮ ಬೇಳೆ ಬೇಯಿಸಿಕೊಳ್ಳುವ ಅವಕಾಶವಾದಿ ರಾಜಕಾರಣಿಗಳ ಸೀಮೆಯಲ್ಲಿ ಕನ್ನಡದ ಗುಡಿಕಟ್ಟಿ ಕನ್ನಡದ ಕಹಳೆ ಮೊಳಗಿಸುತ್ತಿರುವವರಲ್ಲಿ ಚಿಂಚಣಿ ಶ್ರೀಗಳು ಅಗ್ರಗಣ್ಯ ನಾಯಕರಾಗಿದ್ದಾರೆ.

ಪೂಜ್ಯರು 'ನಾಡು ನುಡಿಗಾಗಿ ಮಡಿದರೂ ಚಿಂತೆಯಿಲ್ಲ ನಮಗೆ' ಎಂಬ ನಿರ್ಭಯ ಭಾವನೆಯುಳ್ಳವರಾಗಿದ್ದಾರೆ. "ಪ್ರೀತಿ ತುಂಬಿದ ಯಾವುದೇ ಕಾರ್ಯವು ಜಗತ್ತಿನ ಎಲ್ಲ ಸುಂದರ ಭಾವನೆಗಳನ್ನು ಮೀರಿಸುತ್ತದೆ" ಎಂಬ ಸಂದೇಶ ಹೊತ್ತ ಪೂಜ್ಯರು ಗಡಿಯಲ್ಲಿ ಕನ್ನಡ ಕಟ್ಟುವ, ಕನ್ನಡ ಉಳಿಸಿ ಬೆಳೆಸುವ ಕಾರ್ಯದಲ್ಲಿ ನಿರತರಾಗಿರುವುದನ್ನು ನಾವು ನಿತ್ಯ ಕಾಣುತ್ತೇವೆ.

ಗಜೇಂದ್ರಗಡ ಹಿರೇಮಠದ ಗುರುಲಿಂಗಯ್ಯ ಮತ್ತು ಬಸಮ್ಮ ದಂಪತಿಗಳ ಮಗನಾದ ಶಂಕರಯ್ಯನೆಂಬ ಒಬ್ಬ ಬಾಲಕ ಗಡಿಭಾಗದ ಚಿಕ್ಕೋಡಿ ತಾಲ್ಲೂಕಿನ ಚಿಂಚಣಿ ಮಠದಲ್ಲಿ ನಾಡು ನುಡಿಗಾಗಿ ಪಣತೊಡುವ ಒಬ್ಬ ಕನ್ನಡದ ಸ್ವಾಮೀಜಿಗಳಾಗಿ, ತಾವು ಮೆಟ್ಟುವ ನೆಲ ಕನ್ನಡ, ಕುಡಿಯುವ ಜಲ ಕನ್ನಡ ಎಂದು ಜನರಿಗೆ ತಿಳಿಹೇಳಲು ೧೯೯೭ರಲ್ಲಿ ಗಡಿಕನ್ನಡ ಬಳಗ ಎಂದು ಸ್ಥಾಪಿಸಲು ಕಾರಣವಾದ ಬಗ್ಗೆ ಪೂಜ್ಯರ ಜೀವನದಲ್ಲಿ ಒಂದು ತಿರುವು ಕಂಡು ಬರುತ್ತದೆ.

ಗಜೇಂದ್ರಗಡದ ಶಂಕರಯ್ಯನವರು ಪ್ರೌಢಶಿಕ್ಷಣ ವನ್ನು ಊರಲ್ಲಿ ಪೂರೈಸಿ ಹಿರಿಯಣ್ಣನ ವೈದಿಕ ಕಾರ್ಯದಲ್ಲಿ ನೆರವಾಗಲು ಗದುಗಿನ ತೋಂಟದಾರ್ಯ ಮಠದ ವೈದಿಕ ಪಾಠಶಾಲೆಗೆ ವಿದ್ಯಾರ್ಜನೆಗೆ ತೆರಳಿದಾಗ ಒಂದು ಘಟನೆ ಸಂಭವಿಸಿತು. ಅದುವೇ ಶಂಕರಯ್ಯನವರು ಗುರುಬಸವ ಸ್ವಾಮಿಗಳಾಗಲು ಕಾರಣವಾಯಿತು. ಒಂದು ದಿನಪತ್ರಿಕೆ ನೋಡಿದ ಪೂಜ್ಯ ಜಗದ್ಗುರು ಡಾ. ಶ್ರೀ ಶ್ರೀ ತೋಂಟದ ಸಿದ್ಧಲಿಂಗ ಸ್ವಾಮಿಗಳು ಗಜೇಂದ್ರಗಡದ ಶಂಕರಯ್ಯನನ್ನು ಕರೆದು, 'ಇವತ್ತಿನ ಪತ್ರಿಕೆ







ನೋಡು ಶಂಕರಾ! ನಿಮ್ಮ ಊರಿನ ಒಬ್ಬ ಜೈನ ಹುಡುಗಿ ಇವತ್ತು ಸನ್ಯಾಸ ಸ್ವೀಕರಿಸಿ ದೀಕ್ಷೆ ಪಡೆದುಕೊಂಡಳು. ನಿನಗೇನಾಗಿದೆ?' ಎಂದು ಪ್ರಶ್ನಿಸಿದಾಗ ಇವರಿಗೆ ಹೇಗಾಗಿರಬೇಡ. ಬಹುಶಃ ಆಕಾಶವೇ ಕಳಚಿ ಮೈಮೇಲೆ ಬಿದ್ದಂತೆ ಭಾಸವಾಗಿರಬೇಕು. ಅಂದಿನಿಂದ ಇವರ ನಡೆ-ನುಡಿ ಬದಲಾಗಿ ಅಂತರ್ಮುಖಿ ಗಳಾದರು. ಪೂಜ್ಯರ ಮಾರ್ಗದರ್ಶನದಲ್ಲಿ ಸನ್ಯಾಸತ್ವ ಸ್ವೀಕರಿಸಿ ನರಗುಂದ ತಾಲೂಕಿನ ಶಿರೋಳದ ಶಾಖಾಮಠಕ್ಕೆ ಶಂಕರದೇವರಾಗಿ ಹೋಗಿ, ಉತ್ತಮ ಕಾರ್ಯನಿರ್ವಹಿಸಿ ಶ್ರೀ ಮ.ನಿ.ಪ್ರಸ್ವ ಗುರುಬಸವ ಮಹಾಸ್ವಾಮಿಗಳಾಗಿ ಪೀಠಾಧ್ಯಕ್ಷರಾದರು. ಪೂರ್ವಾಶ್ರಮದ ಶಂಕರಯ್ಯನವರು ಸಹೋದರರಿಂದ ಒಂದು ಎಕರೆ ಜಮೀನು ಪಡೆದು ಶಿಕ್ಷಣ ಸಂಸ್ಥೆಗೆ ದಾನರೂಪದಲ್ಲಿ ನೀಡಿದರು. ಅದುವೇ ಈಗ ೬೦೦ ವಿದ್ಯಾರ್ಥಿಗಳ ಕನ್ನಡ ಮಾಧ್ಯಮದ ಪ್ರೌಢಶಾಲೆಯಾಗಿ ಕಂಗೊಳಿಸುತ್ತಿದೆ.

ಹೀಗೆ ಶ್ರೀ ಶ್ರೀ ಮನಿಪ್ರ ಗುರುಬಸವ ಮಹಾಸ್ವಾಮಿಗಳು ಗದುಗಿನ ಜಗದ್ಗುರುಗಳ ಮಾರ್ಗದರ್ಶನದಂತೆ ನಡೆದು ಶಿರೋಳದ ಶಾಖಾಮಠವನ್ನು ಗದುಗಿನ ತೋಂಟದಾರ್ಯ ಮಠದಂತೆ ಕೋಮುಸೌಹಾರ್ದತೆಯ ತಾಣವನ್ನಾಗಿ ಮಾಡಿದರು. ಶ್ರೀಗಳ ಸಾಧನೆ ಅರಿತ ಚಿಂಚಣಿ ಮಠದ ಭಕ್ತರು ತಮ್ಮಲ್ಲಿಗೆ ಬರಬೇಕೆಂದು ಒತ್ತಾಯಿಸಿದಾಗ ಒತ್ತಾಯಕ್ಕೆ ಕಟ್ಟುಬಿದ್ದು ಗದುಗಿನ ಪೂಜ್ಯರ ಆದೇಶದ ಮೇರೆಗೆ ಎರಡು ಮಠಗಳ ಉಸ್ತುವಾರಿ ವಹಿಸಿಕೊಂಡರು.

**ಚಿಂಚಣಿಶ್ರೀ ಹಾಗೂ ಚಿಂಚಣಿ ಮಠ**

ಚಿಂಚಣಿ ಶ್ರೀಗಳವರದು ಸರಳ ಸ್ವಭಾವ, ಮಾತು ಮೃದು, ಎಂಥವರನ್ನು ಆಕರ್ಷಿಸುವ ವ್ಯಕ್ತಿತ್ವ ನಿಷ್ಕಲ್ಮಷ ಮನಸ್ಸು, ನಿರಾಡಂಬರ ಬದುಕು, ಬಸವಮಾರ್ಗದ ಪಥಿಕರು. ಗದುಗಿನ ಜಗದ್ಗುರು ಡಾ. ಶ್ರೀ ಶ್ರೀ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳನ್ನೇ ಆದರ್ಶವಾಗಿಟ್ಟು ಕೊಂಡು ಅದನ್ನೆ ಶ್ರೀಮಠದಲ್ಲಿ ಪ್ರತಿಷ್ಠಾಪಿಸುವ ಛಲಗಾರರು ಹೌದು. ಶ್ರೀಗಳನ್ನು ಅಪರೂಪದ ಕನ್ನಡ ಯೋಗಿ, ಗಡಿನಾಡಿನ ಪುಟ್ಟಪ್ಪ, ಗಡಿನಾಡಿನ ದೀಪಸ್ತಂಭ, ಕನ್ನಡ ಸ್ವಾಮೀಜಿ, ಪುಸ್ತಕ ಸ್ವಾಮೀಜಿ, ಕನ್ನಡಪ್ರಭು ಎಂದು ಸಂಬೋಧಿಸುವುದು ಉಂಟು.

ಇವರು ತೆರೆಮರೆಯ ಕಲಾವಿದರು, ಬರಹ ಗಾರರನ್ನ ಬೆಳಕಿಗೆ ತಂದವರು, ನಶಿಸಿ ಹೋಗುತ್ತಿರುವ ಜಾನಪದ ಕಲೆಗೆ ಉತ್ತೇಜನ ನೀಡಿದವರು, ಪುಟ್ಟ ವಸ್ತು ಸಂಗ್ರಾಲಯ ರೂಪಿಸಿಕೊಂಡವರು, ಗಿಡ ಮರಗಳ ಬಗ್ಗೆ ಮನುಷ್ಯ ಪ್ರೀತಿ ಬೆಳೆಸಿಕೊಂಡವರು, ಬಿದಿರು ಕಡ್ಡಿ, ಕಾಗದ ತುಂಡುಗಳಿಂದ ಕಲಾಕೃತಿಗಳನ್ನು ಅರಳಿಸುತ್ತ ಬಂದವರು, ವಿದ್ಯಾರ್ಥಿಗಳ ಜೊತೆ ಒಂದಾಗಿ ಬಾಳಿನ ಬುತ್ತಿ ಕಟ್ಟಿಕೊಡುವವರು, ಅಲ್ಲಮ ಪ್ರಭು ಜನಕಲ್ಯಾಣ ಸಂಸ್ಥೆಯ ಮೂಲಕ ಅಂದು ಬಸವಣ್ಣ ಕಲ್ಯಾಣದಲ್ಲಿ ಹಚ್ಚಿದ ದೀಪದ ಬೆಳಕನ್ನು ಇಂದು ಎಲ್ಲೆಡೆಗೆ ಪಸರಿಸುತ್ತಿರುವವರು.

**ಅನುಭವ ಮಂಟಪ**

ಶ್ರೀಮಠವನ್ನು ಬಸವ ಸಂದೇಶ ಸಾರುವ 'ಅನುಭವ ಮಂಟಪ'ವಾಗಿ ಪರಿವರ್ತಿಸಿ ಹಲವು ದೀರ್ಘಕಾಲೀನ ಯೋಜನೆಗಳನ್ನು ರೂಪಿಸಿ ಅನುಷ್ಠಾನ ತರುವಲ್ಲಿ ಯಶಸ್ವಿಯಾಗಿದ್ದಾರೆ. ಇವುಗಳಲ್ಲಿ 'ಬಾಳಿನ ಬುತ್ತಿ ಕಲಿಕಾಕೇಂದ್ರ' 'ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ', 'ಕನ್ನಡ ಜಾಗೃತಿ ಪುಸ್ತಕ ಮಾಲೆ' ಇವು ವಿನೂತನವಾದವು. ಬಾಳಿನ ಬುತ್ತಿ ಕಲಿಕಾ ಕೇಂದ್ರದ ಮಕ್ಕಳ ಜ್ಞಾನ ಸಂಪನ್ನತೆ ನಮ್ಮನ್ನು ಆಶ್ಚರ್ಯ ಚಕಿತಗೊಳಿಸುತ್ತದೆ. ಈ ಕಲಿಕಾ ಕೇಂದ್ರದ ಗುರು 'ಒಬ್ಬ ಮುಸಲ್ಮಾನ ಬಂಧು' ಎಲ್ಲ ಜಾತೀಯ ಮಕ್ಕಳು ಇಲ್ಲಿ ಶಾಮೀಲು ಆಗಿದ್ದಾರೆ. ಒಂದು ಕಡೆಯಿಂದ ಯುವ ಸಂಘದ ಕಾರ್ಯಕರ್ತರು ಪೂಜ್ಯರಿಗೆ ಪ್ರೀತಿಯ ಶುಭಾಶಯ ಹೇಳಿದರೆ ಇನ್ನೊಂದು ಕಡೆಯಿಂದ ಮುಸ್ಲಿಂ ಬಾಂಧವರು ಅಷ್ಟೇ ಪ್ರೀತಿಯ 'ಸಲಾಂ ಅಲೈ ಕುಂ' ಹೇಳುತ್ತಾರೆ. ಇಬ್ಬರಿಗೂ ಮುಗುಳುನಗುತ್ತ ಪ್ರತಿಕ್ರಿಯೆ ಪೂಜ್ಯರದು.

**ಕನ್ನಡ ಮಠ**

ಶ್ರೀಮಠದ ಸಾಮಾಜಿಕ ಸಂಸ್ಥೆಯ ಹೆಸರು 'ಜನ ಕಲ್ಯಾಣ ಸಂಸ್ಥೆ'. ಗಡಿಪ್ರದೇಶಗಳ ಕನ್ನಡಿಗರಿಗೆ ಹಿತರಕ್ಷಣೆ ನೀಡಿ ನಾವು ನಮ್ಮನ್ನು ಕಾಪಾಡಿ ಕೊಳ್ಳಬೇಕಾಗಿದೆ. ಹೀಗಾಗಿ ಇವರಿಗೆ 'ಕನ್ನಡ ಹಬ್ಬವೇ ಶಿವರಾತ್ರಿ, ನುಡಿ ಸೇವೆ ಬಸವ ಪೂಜೆ, ಕನ್ನಡಿಗರ ಕೈಂಕರ್ಯವೇ ಲಿಂಗಾರಾಧಾನೆ'. ಗದುಗಿನ ಸ್ವಾಮೀಜಿಯವರು ಕನ್ನಡದ ಜಗದ್ಗುರುಗಳಾದರೆ ಚಿಂಚಣಿಯ ಅಲ್ಲಮಪ್ರಭು ಮಹಾಸ್ವಾಮಿಗಳು 'ಕನ್ನಡ ಶಿವಯೋಗಿ' ಆಗಿದ್ದಾರೆ. ಅವರ ಮಠ 'ಕನ್ನಡ ಮಠ' ಎಂದು ಹೆಸರಾಗಿದೆ.

ಬಹಳಷ್ಟು ಮಠಗಳಲ್ಲಿ ಜಾತ್ರೆಯನ್ನು ಮಾಡುತ್ತಾರೆ ತಮ್ಮ ಗುರುಗಳ ಮೂರ್ತಿ ಇಟ್ಟು ಪೂಜೆ ಮಾಡುತ್ತಾರೆ ಆದರೆ ಚಿಂಚಣಿ ಮಠದಲ್ಲಿ ನವೆಂಬರ್ ೧ ರಂದು, ಕನ್ನಡ ರಾಜ್ಯೋತ್ಸವವನ್ನು ವೈಶಿಷ್ಟ್ಯ ಪೂರ್ಣವಾಗಿ ಆಚರಿಸುತ್ತಾರೆ. ಚಿಂಚಣಿ ಮಠದ ಕನ್ನಡ ರಥ ರಾಜ್ಯದಲ್ಲಿಯೆ ಏಕೈಕ ಕನ್ನಡ ತೇರು, ಕನ್ನಡ ಜ್ಞಾನಪೀಠ ಸಾಹಿತಿಗಳ ಭಾವಚಿತ್ರಗಳನ್ನು ಹೊತ್ತ ಈ ತೇರು ನವೆಂಬರ್ ೧ರಂದು ಊರೆಲ್ಲ ಸುತ್ತಿ





ಸಮಾರಂಭದ ವೇದಿಕೆ ಹತ್ತಿರ ಬರುವುದು. ಸ್ಥಳೀಯರು ತುಂಬಾ ಉತ್ಸಾಹದಿಂದ ಈ ತೇರು ಎಳೆಯುವುದನ್ನು ಪ್ರತ್ಯಕ್ಷವಾಗಿ ನೋಡಬೇಕು. ಹಾಗೆಯೇ ಹಳ್ಳಿಯ ರೈತ ಮಹಿಳೆ ತಲೆಯ ಮೇಲೆ ಬುಟ್ಟಿ ಹೊತ್ತು ಹೊಲಕ್ಕೆ ಹೋಗುವ ರೀತಿಯಲ್ಲಿಯೆ ಗ್ರಂಥಗಳನ್ನು ಹೊತ್ತು ತಂದು ಮುಖ್ಯ ಅತಿಥಿಗಳಿಂದ ಸಸಿಗಳಿಗೆ ನೀರೆರೆಯುವ ಮೂಲಕ ಗ್ರಂಥ ಬಿಡುಗಡೆ ಮಾಡುವ ಸಂದರ್ಭ, ಗ್ರಂಥ ರಚಿಸಿದ ಲೇಖಕರಿಗೆ ತಲೆಯ ಮೇಲೆ ಪೇಟಾ ಹಾಕಿ ಪುಷ್ಪ ವೃಷ್ಟಿ ಮಾಡುವದಲ್ಲದೆ, ಪತ್ನಿಯಿಂದ ಪತಿಗೆ, ಪತಿಯಿಂದ ಪತ್ನಿಗೆ ಪರಸ್ಪರ ಹೂವಾಲೆಯನ್ನ ವಿನಿಮಯ ಮಾಡಿಕೊಳ್ಳುವ ಸಂದರ್ಭವಂತೂ ಈ ದಂಪತಿಗಳು ಈಗತಾನೆ ಮದುವೆ ಆದರೇನೋ ? ಜಿಲ್ಲೆಯ ಸಾಹಿತಿ, ಸಾಹಿತ್ಯಾಸಕ್ತರು, ಕನ್ನಡ ಪ್ರೇಮಿಗಳೆಲ್ಲರು ಇದಕ್ಕೆ ಸಾಕ್ಷಿ ಆದರೇನೂ ಎನಿಸುತ್ತದೆ. ಈ ರಾಜ್ಯೋತ್ಸವ ಬೆಂಗಳೂರಿನಲ್ಲಿ ನಡೆಯುತ್ತಿರುವ ರಾಜ್ಯೋತ್ಸವಕ್ಕೆ ಯಾವುದರಲ್ಲಿ ಕಡಿಮೆ ಇಲ್ಲ ಎಂಬ ಭಾವನೆ ನನ್ನದು.

ಶ್ರೀಗಳು 'ಕನ್ನಡ ಜಾಗೃತಿ ಪುಸ್ತಕ ಮಾಲೆ' ಮೂಲಕ ಕನ್ನಡ ನಾಡು, ನುಡಿ, ನಾಡವರು, ನಾಡಿಗಾಗಿ ದುಡಿದವರು, ಮಡಿದವರು, ನಾಡ ಏಳ್ಗೆಗಾಗಿ ಶ್ರಮಿಸಿದ ಸಂಘ ಸಂಸ್ಥೆಗಳು, ಕನ್ನಡ ರಂಗಭೂಮಿ, ಏಕೀಕರಣ ಚಳುವಳಿ, ಕರ್ನಾಟಕದ ಆತಂಕಗಳು, ಸುಪ್ರೀಂ ಅಂಗಳದಿಂದ ಗಡಿ ಸಮಸ್ಯೆಯ ಪಕ್ಷಿನೋಟ, ಕನ್ನಡಪರ ಚಿಂತನೆ ಮತ್ತು ಪರಂಪರೆ ಹೀಗೆ ಒಂದೇ ಎರಡೆ ಹಲವು ಹತ್ತು ವಿಷಯ ವೈವಿಧ್ಯಗಳು. ಮುಂದೆ ಒಂದು ದಿನ ಶ್ರೀಮಠದ ಕುರಿತು ಒಂದು ಮಹಾಪ್ರಬಂಧ ಪ್ರಕಟವಾಗಬಹುದು ಎಂದು ಗದುಗಿನ ಜಗದ್ಗುರು ಡಾ. ಶ್ರೀ ಶ್ರೀ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು ಭವಿಷ್ಯ ನುಡಿದಿದ್ದರು, ಆ ಭವಿಷ್ಯ ಈಗ ಸತ್ಯವಾಗಿದೆ. ೨೦೧೧ರಲ್ಲಿ 'ಕನ್ನಡ ಜಾಗೃತಿ ಕೇಂದ್ರ ಚಿಂಚಣಿ ಮಠ' ಎನ್ನುವ ವಿಷಯ ಕುರಿತು ಡಾ. ಶ್ರೀಶೈಲ ಮಠಪತಿ ಅವರು ಎಂ.ಫಿಲ್ ಪದವಿ ಪಡೆದಿರುವುದು ಸಂತಸದ ಸಂಗತಿಯಾಗಿದೆ. ಶ್ರೀಗಳು ಕನ್ನಡ ನೆಲ, ಜಲ ಕುರಿತು ಮಾಡಿದ ಹಾಗೂ 'ಕನ್ನಡ ಮತ್ತು ಮರಾಠಿಗರಲ್ಲಿ ಬೆಸೆದ ಭಾಷಾ ಬಾಂಧವ್ಯ' ಕುರಿತು ಪಿಎಚ್.ಡಿ. ಮಾಡುವಷ್ಟು ವಿಷಯ ಸಂಗ್ರಹವಿದೆ.

**ಹೋರಾಟದ ಸ್ವಾಮೀಜಿ**

ಕರ್ನಾಟಕದ ಗಡಿ ಸಮಸ್ಯೆ ಎಲ್ಲರಿಗೂ ವೇದ್ಯವಾದ ಸಂಗತಿಯಾಗಿದೆ. ಭಾಷಾವಾರು ಪ್ರಾಂತ ರಚನೆಯ ಕಾರಣವಾಗಿ 'ಬೆಳಗಾವಿ ಕರ್ನಾಟಕದ ಅವಿಭಾಜ್ಯ ಅಂಗ'ವಾಗಿದ್ದರೂ ಮರಾಠಿ ಭಾಷಿಕರು ಆಗಾಗ ಗಲಭೆ ಮಾಡುತ್ತ ಬಂದಿದ್ದಾರೆ. ನಿಪ್ಪಾಣಿ ಒಂದು ಕಾಲದಲ್ಲಿ ಸಂಘರ್ಷದ ಕೇಂದ್ರವಾಗಿತ್ತು ಅಂಥ ಪರಿಸರದಲ್ಲಿ ಶ್ರೀಗಳು ಮರಾಠಿಗರ ಮನಗೆದ್ದು ಕರ್ನಾಟಕದ ಉತ್ತರ ಗಡಿಯಲ್ಲಿ ಸೌಹಾರ್ದತೆ ಮೂಡಿಸಿ ಮರಾಠಿಗರ ಪಾಲಿಗೆ ಅಚ್ಚು ಮೆಚ್ಚಿನ ಸ್ವಾಮಿಗಳಾದರು. ಶ್ರೀಗಳ ನೇತೃತ್ವದಲ್ಲಿ ನಿಪ್ಪಾಣಿಯಲ್ಲಿ ವೀರ ರಾಣಿ ಚನ್ನಮ್ಮನ ಮೂರ್ತಿ ಪ್ರತಿಷ್ಠಾಪನೆಯಾದುದು ಕನ್ನಡಿಗರ ವೀರ ವಿಜಯವೆಂದೆ ಹೇಳಬೇಕು. ಕರ್ನಾಟಕ ಮಹಾರಾಷ್ಟ್ರದ ಆರಾಧ್ಯ ದೈವವಾದ ಪಂಡರಪುರದ ವಿಠ್ಠಲ ಸ್ವಾಮಿಯನ್ನು ಕನ್ನಡದ ವಿಠ್ಠಲ (ಕಾನಡಿ ವಿಠ್ಠಲ) ಎಂದು ಮಹಾರಾಷ್ಟ್ರದ ಜನ ಹಾಡಿ ಹೊಗಳುವಂತೆ ಚಿಂಚಣಿಯ ನಮ್ಮ ಅಲ್ಲಮಪ್ರಭು ಸ್ವಾಮಿಗಳನ್ನು ಗಡಿಯ ಆಚೀಚಿನ ಮರಾಠಿಗರೆಲ್ಲ ಕನ್ನಡ ಸ್ವಾಮೀಜಿ (ಕಾನಡಿ ಸ್ವಾಮೀಜಿ) ಎಂದು ಒಪ್ಪಿಕೊಂಡಿದ್ದಾರೆ. ಇವರು ಕೊಲ್ಹಾಪೂರ ಮುಂತಾದ ಮರಾಠಿ ಪ್ರದೇಶಗಳಿಗೆ ಹೋದರೆ 'ಕನ್ನಡ ಸ್ವಾಮೀಜಿ ಆಲೇ ರೆ' (ಕನ್ನಡ ಸ್ವಾಮೀಜಿ ಬಂದರು) ಎಂದು ಒಪ್ಪಿಕೊಂಡಿದ್ದಾರೆ. ಕನ್ನಡಿಗರು ಮರಾಠಿಗರು ಒಂದೇ ತಾಯಿಯ ಮಕ್ಕಳೆಂಬ ಭಾವನೆಯನ್ನು ಅಲ್ಲಿಯ ಮರಾಠಿ ಮನೆ-ಮನಗಳಲ್ಲಿ ತುಂಬಿದ್ದು ದೊಡ್ಡ ಕೆಲಸ, ಇದು ಕರ್ನಾಟಕ ಮಹಾರಾಷ್ಟ್ರಗಳ ನಡುವಣ ಸೌಹಾರ್ದದ ಸೇತುವನ್ನು ಗಟ್ಟಿಗೊಳಿಸುವಂತದ್ದು. ಇಲ್ಲಿ ಚಿಕ್ಕೋಡಿ ಯಡೂರ ಶ್ರೀಗಳ ಸೇವೆ ಸ್ಮರಣೀಯ.

ಹೀಗೆ ಶ್ರೀಮಠವು ಕರ್ನಾಟಕದ ಉತ್ತರ ಗಡಿಭಾಗದಲ್ಲಿ ಮಾಡಿದಂತಹ ಕನ್ನಡದ ಕೆಲಸ ಅನನ್ಯವಾಗಿದೆ. ಒಂದು ವಿಶ್ವವಿದ್ಯಾಲಯ ಮಾಡದ ಅಥವಾ ಒಂದು ಸರ್ಕಾರ ಮಾಡಲು ಹಿಂದೇಟು ಹಾಕುತ್ತಿರುವ ಕಾರ್ಯವನ್ನು ಒಬ್ಬ ವ್ಯಕ್ತಿ ಒಂದು ಸಂಸ್ಥೆಯಾಗಿ ಮಾಡುವ ರಚನಾತ್ಮಕ ಕಾರ್ಯವನ್ನು ಚಿಂಚಣಿ ಶ್ರೀಗಳು ಮಾಡಿದ್ದಾರೆ. ಶ್ರೀಗಳು ಪ್ರಕಟಿಸಿದ ಗ್ರಂಥಗಳು ಕನ್ನಡ ನೆಲ ಜಲ ಹಾಗೂ ಕರ್ನಾಟಕ ಮಹಾರಾಷ್ಟ್ರದ ಗಡಿ ಸಮಸ್ಯೆಗಳಿಗೆ ಪರಿಹಾರ ಒದಗಿಸಬಲ್ಲ ಮೌಲ್ಯಯುತ ಆಕರ ಗ್ರಂಥಗಳಾಗಿವೆ ಎಂಬುವುದನ್ನು ಅಂತರಂಗದ ಕಣ್ಣನ್ನು ತೆರೆದು ನೋಡಬೇಕಾಗಿದೆ..

**(ಇದೆ ಡಿಸೆಂಬರ ೨೧, ೨೨ ಎರಡು ದಿನಗಳ ಕಾಲ ಬೆಳಗಾವಿ ಜಿಲ್ಲೆಯ ೧೫ನೇ ಕನ್ನಡ ಸಾಹಿತ್ಯ ಸಮ್ಮೇಳನವು ಚಿಕ್ಕೋಡಿಯಲ್ಲಿ ಜರಗುವುದು, ಪ್ರಸ್ತುತ ಸಮ್ಮೇಳನದ ಸರ್ವಾಧ್ಯಕ್ಷತೆಯನ್ನು ಶ್ರೀಮ.ನಿ.ಪ್ರಸ್ವ ಶ್ರೀ ಅಲ್ಲಮಪ್ರಭು ಮಹಾಸ್ವಾಮಿಗಳು ಸಿದ್ಧ ಸಂಸ್ಥಾನ ಮಠ, ಚಿಂಚಣಿ ವಹಿಸಿಕೊಂಡಿರುವ ನಿಮಿತ್ತ ಈ ಲೇಖನ.)**

## ಅಭಿನಂದನೆ

### ಸಹಕಾರಿ ಧುರೀಣ ಶ್ರೀ ಬಿ.ಎಸ್. ಪರಮಶಿವಯ್ಯನವರಿಗೆ 'ಸಹಕಾರಿ ರತ್ನ' ಪ್ರಶಸ್ತಿ

ಕರ್ನಾಟಕ ವೀರಶೈವ-ಲಿಂಗಾಯತ ಅಭಿವೃದ್ಧಿ ನಿಗಮದ ಅಧ್ಯಕ್ಷರು, ಕರ್ನಾಟಕ ವೀರಶೈವ ವಿದ್ಯಾಭಿವೃದ್ಧಿ ಸಂಸ್ಥೆ, ವೀರಶೈವ ಸಹಕಾರಿ ಬ್ಯಾಂಕ್ ಅಧ್ಯಕ್ಷರಾಗಿರುವ ಸಹಕಾರಿ ಧುರೀಣ ಶ್ರೀ ಬಿ.ಎಸ್. ಪರಮಶಿವಯ್ಯನವರು ೨೦೨೨ನೇ ಸಾಲಿನ ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಳ ನಿಯಮಿತ ವತಿಯಿಂದ ಕೊಡಮಾಡುವ ಪ್ರತಿಷ್ಠಿತ 'ಸಹಕಾರಿ ರತ್ನ' ಪ್ರಶಸ್ತಿಗೆ ಭಾಜನರಾಗಿರುವುದಕ್ಕೆ 'ಸಿದ್ಧಗಂಗಾ' ಹೃತ್ಪೂರ್ವಕವಾಗಿ ಅಭಿನಂದಿಸುತ್ತದೆ.ಕಳೆದ ಐವತ್ತು ವರ್ಷಗಳಿಂದ ಸಹಕಾರಿ ಕ್ಷೇತ್ರದಲ್ಲಿ ಅಮೂಲ್ಯ ಸೇವೆ ಸಲ್ಲಿಸುತ್ತಾ ಬಂದಿರುವ ಶ್ರೀ ಬಿ.ಎಸ್. ಪರಮಶಿವಯ್ಯ ನವರು ಅನೇಕ ಸಂಘ ಸಂಸ್ಥೆಗಳಲ್ಲಿ ವಿವಿಧ ಹುದ್ದೆಗಳಲ್ಲಿ ಸೇವೆ ಸಲ್ಲಿಸಿ ಅಯಾ ಹುದ್ದೆಗಳಿಗೆ ಘನತೆ ಗೌರವವನ್ನು ತಂದುಕೊಟ್ಟಿರುವ ಜೊತೆಗೆ ಆಯಾ ಸಂಸ್ಥೆಗಳ ಅಭಿವೃದ್ಧಿಗೆ ಕಾರಣರಾಗಿದ್ದಾರೆ. ಶೈಕ್ಷಣಿಕ, ಧಾರ್ಮಿಕ, ಸಾಮಾಜಿಕ ಕ್ಷೇತ್ರಗಳಲ್ಲಿ ಅವರು ಸಲ್ಲಿಸಿರುವ ಸೇವೆ ಸ್ಮರಣೀಯವಾದುದು. ಇದೇ ಸಂದರ್ಭದಲ್ಲಿ ೮೩ ವಸಂತಗಳ ಬೇವು ಬೆಲ್ಲವನ್ನು ಸಮಚಿತ್ತದಿಂದ ಸವಿದು ೮೪ನೇ ವರ್ಷಕ್ಕೆ ಪಾದಾರ್ಪಣೆ ಮಾಡುತ್ತಿರುವ ಶ್ರೀ ಬಿ.ಎಸ್. ಪರಮಶಿವಯ್ಯನವರಿಗೆ ಬಸವಾದಿ ಶರಣರು ಹಾಗೂ ಶ್ರೀ ಸಿದ್ಧಗಂಗಾ ಗುರು ಪರಂಪರೆ ಆರೋಗ್ಯ, ಆಯುಷ್ಯ, ಯಶಸ್ಸು ಕೊಡಲೆಂದು ಸಿದ್ಧಗಂ■

### "ದೇವಗಂಗೆ ಇದು ಸಿದ್ಧಗಂಗೆ"

ಸಿದ್ಧಗಂಗೆ ಇದು ದೇವಗಂಗೆ
ಶಿವಕುಮಾರ ಸ್ವಾಮಿಗಳ ಪುಣ್ಯಗಂಗೆ
ಲಕ್ಷ ಲಕ್ಷ ಮಕ್ಕಳಿಗೆ ಜೀವ ಗಂಗೆ
ಅನ್ನ ಅರಿವು ಆಶ್ರಯದ ತೀರ್ಥಗಂಗೆ.

ಕಾಯಕ ದಾಸೋಹದ ಭಕ್ತಿ ಗಂಗೆ
ಅಂಧಕಾರ ಅಳಿಸುವ ಮುಕ್ತಿ ಗಂಗೆ
ಹಸಿವು ಬಾಧೆ ನೀಗಿಸುವ ಶಕ್ತಿ ಗಂಗೆ
ಭಾರತಾಂಬೆ ಪಾದ ತೊಳೆವ ಜ್ಞಾನ ಗಂಗೆ.

ಬಸವತತ್ವ ಪಾಲಿಸುವ ಬಸವ ಗಂಗೆ
ಜಾತಿ ರೋಗ ಭೀತಿ ರಹಿತ ಮಾತೃ ಗಂಗೆ
ವಾತ್ಸಲ್ಯದ ಮಡಿಲು ಕಂಡ ಪವಿತ್ರ ಗಂಗೆ
ಯಾತ್ರಾರ್ಥಿಗಳ ತೀರ್ಥಕ್ಷೇತ್ರ ಪೂಜ್ಯ ಗಂಗೆ.

ಲೋಕಪೂಜ್ಯ ಯತಿಗಳ ಕಾರುಣ್ಯ ಗಂಗೆ
ಶರಣರಿಗೆ ಶೂನ್ಯ ಪೀಠ ದಿವ್ಯಗಂಗೆ
ಭಕುತರ ಪುಣ್ಯಕ್ಷೇತ್ರವಿದು ಭವ್ಯ ಗಂಗೆ
ತಪೋಭೂಮಿ ಸಿದ್ಧ ಕ್ಷೇತ್ರ ಪರಮ ಗಂಗೆ.

ದಾಸೋಹದ ಮೇರು ಶಿಖರ ಸಿದ್ಧಗಂಗೆ
ಸೇವೆಯಲ್ಲಿ ಶಿವನ ಕಂಡ ಸಿದ್ಧಗಂಗೆ
ಭಾವೈಕ್ಯದ ಭಕ್ತಿ ಕ್ಷೇತ್ರ ಸಿದ್ಧಗಂಗೆ
ಸಿದ್ಧಲಿಂಗ ತಪವಗೈದ ನೆಲೆಯ ಗಂಗೆ.

ಕೋಟಿ ಕೋಟಿ ಭಕುತರ ಜೀವಗಂಗೆ
ವಿಶ್ವ ವ್ಯಾಪಿ ಕೀರ್ತಿ ಪಡೆದ ಪ್ರಾಣಗಂಗೆ
ನಿಸ್ವಾರ್ಥ ಸೇವೆ ಮಾಡಿದ ಸ್ಫೂರ್ತಿ ಗಂಗೆ
ಇದು ಸಿದ್ಧಗಂಗೆ ಶಿವಕುಮಾರ ಗಂಗೆ.

– ಕೆ.ಮಹಾಲಿಂಗಯ್ಯ, (ಜಂಗಮ)
ನಿವೃತ್ತ ಕನ್ನಡ ಅಧ್ಯಾಪಕ
ದೊಡ್ಡಬಳ್ಳಾಪುರ



ವರದಿ :

## ಸಿದ್ಧಗಂಗಾ ವೈದ್ಯಕೀಯ ಮಹಾವಿದ್ಯಾಲಯ ಮತ್ತು ಸಂಶೋಧನಾ ಸಂಸ್ಥೆ

**ಸಿದ್ಧಗಂಗಾ ಆಸ್ಪತ್ರೆಯಲ್ಲಿ ಯಶಸ್ವಿಯಾಗಿ ನಡೆದ ಹಾರ್ಟ್ ವಾಲ್ವ್ ರೀಪ್ಲೇಸ್ಮೆಂಟ್ ಸರ್ಜರಿ**

ರಕ್ತ ಸಂಚಲನೆಗೆ ಸಹಾಯವಾಗುವ ಎದೆಯ ಕವಾಟ(ಹಾರ್ಟ್‌ವಾಲ್ವ್) ಸರಿಯಾಗಿ ತೆರೆದುಕೊಳ್ಳದೆ ತೀವ್ರ ಎದೆನೋವು, ಉಬ್ಬಸ, ಸುಸ್ತು ಹಾಗೂ ತಲೆಸುತ್ತಿನಿಂದ ಬಳಲುತ್ತಿದ್ದ ಪಾವಗಡ ಮೂಲದ ೬೦ ವರ್ಷದ ರಂಗಪ್ಪ ಎನ್ನುವವರಿಗೆ ಸಿದ್ಧಗಂಗಾ ಆಸ್ಪತ್ರೆಯಲ್ಲಿ ಯಶಸ್ವಿ ತೆರೆದ ಹೃದಯ ಶಸ್ತ್ರಚಿಕಿತ್ಸೆಯಲ್ಲಿ ವಾಲ್ವ್ ರೀಪ್ಲೇಸ್ಮೆಂಟ್ ನಡೆಸಲಾಗಿದೆ.

ಈ ಕುರಿತು ಸಿದ್ಧಗಂಗಾ ಆಸ್ಪತ್ರೆಯಲ್ಲಿ ಸಂತಸ ಹಂಚಿಕೊಂಡ ಸಿದ್ಧಗಂಗಾ ಆಸ್ಪತ್ರೆ ನಿರ್ದೇಶಕ ಡಾ.ಎಸ್.ಪರಮೇಶ್ "ಈಗಾಗಲೇ ಹೃದ್ರೋಗ ವಿಭಾಗದಲ್ಲಿ ಸಹಸ್ರಾರು ಜನರಿಗೆ ತಪಾಸಣೆ, ಶಸ್ತ್ರಚಿಕಿತ್ಸೆ ನಡೆಸಿ ಜನರ ವಿಶ್ವಾಸಕ್ಕೆ ಪಾತ್ರವಾಗಿದ್ದ ನಮ್ಮ ಆಸ್ಪತ್ರೆ ಇದೀಗ ತೆರೆದ ಹೃದಯ ಶಸ್ತ್ರಚಿಕಿತ್ಸೆ ನಡೆಸಿ ಹೊಸ ಮೈಲಿಗಲ್ಲು ಸಾಧಿಸಿದ್ದು ಹೆಮ್ಮೆಯನಿಸಿದೆ. ಸಿದ್ಧಗಂಗಾ ಶ್ರೀಗಳವರ ಆಶೀರ್ವಾದದ ಫಲವೇ ಈ ಯಶಸ್ಸಿಗೆ ಕಾರಣ" ಎಂದರು. ನಮ್ಮ ಆಸ್ಪತ್ರೆ ಯಶಸ್ವಿ ಕಿಡ್ನಿ ಕಸಿ ನಡೆಸಿ ರಾಜ್ಯದ ಗಮನ ಸೆಳೆದಿತ್ತು. ಇದೀಗ ತೆರೆದ ಹೃದಯ ಶಸ್ತ್ರಚಿಕಿತ್ಸೆ ಮೂಲಕ ಮತ್ತೊಮ್ಮೆ ಹೆಗ್ಗುರುತು ಸ್ಥಾಪಿಸಿದೆ.

ರೋಗಿಗೆ ಬಿಪಿ ಹಾಗೂ ವಯೋಸಹಜ ಅಸ್ವಸ್ಥತೆಗಳು ಹೆಚ್ಚಾಗಿದ್ದವು. ತೆರೆದ ಹೃದಯ ಶಸ್ತ್ರಚಿಕಿತ್ಸೆಗಳಲ್ಲಿ ೧೫ ವರ್ಷಗಳ ಅನುಭವವುಳ್ಳ ಕಾರ್ಡಿಯೋಥೊರಾಸಿಕ್ ಸರ್ಜನ್ ಡಾ.ರವಿಚಂದ್ರರವರ ಕಾರ್ಯದಕ್ಷತೆ, ಅನುಭವ, ಸಿದ್ಧಗಂಗಾ ಆಸ್ಪತ್ರೆಯ ಹೃದ್ರೋಗ ವಿಭಾಗದ ಎಲ್ಲಾ ವೈದ್ಯಕೀಯ ಸಿಬ್ಬಂದಿ ನೆರವಿನಿಂದ ಯಶಸ್ವಿಯಾಗಿ ಹೃದಯದ ಕವಾಟ(ವಾಲ್ವ್) ಬದಲಿಸಲಾಗಿದೆ. ರೋಗಿ ಈಗ ಸಂಪೂರ್ಣ ಚೇತರಿಕೆ ಹೊಂದಿದ್ದು ತಮ್ಮ ಮೊದಲಿನ ಜೀವನಕ್ಕೆ ಮರಳಿದ್ದಾರೆ ಎಂದು ಹೃದ್ರೋಗ ತಜ್ಞ ಡಾ. ಹೆಚ್.ಎಂ ಭಾನುಪ್ರಕಾಶ್ ತಿಳಿಸಿದರು.

ಡಾ.ರವಿಚಂದ್ರ ಮಾತನಾಡಿ "ತೆರೆದ ಹೃದ್ರೋಗ ಶಸ್ತ್ರಚಿಕಿತ್ಸೆ ನಡೆಸುವುದು ಬಹಳ ಕಠಿಣವಾಗಿತ್ತು. ರೋಗಿಗೆ ಸತತ ಐದು ಗಂಟೆಗಳ ಕಾಲ ಸರ್ಜರಿ ನಡೆಸಲಾಯಿತು. ಬೈಪಾಸ್ ಸರ್ಜರಿ, ವಾಲ್ವ್ ರಿಪೇರ್ ಸೇರಿದಂತೆ ಜನ್ಮದಾತ ಹೃದಯರೋಗ ಸಮಸ್ಯೆಗಳಿಗೂ ನಮ್ಮಲ್ಲಿ ಶಸ್ತ್ರಚಿಕಿತ್ಸೆ ನಡೆಸಲಾಗುತ್ತಿದೆ" ಎಂದರು. ಈ ಸಂದರ್ಭದಲ್ಲಿ ಹೃದ್ರೋಗ ತಜ್ಞ ಡಾ.ಜೆ.ವಿ. ಶರತ್ ಕುಮಾರ್, ಸಿಇಓ ಡಾ.ಸಂಜೀವ್ ಕುಮಾರ್ ಮುಂತಾದವರು ಉಪಸ್ಥಿತರಿದ್ದರು.

**ಯಶಸ್ವಿ ಆಪರೇಷನ್‌ಗಳು**

**೮೫ ವರ್ಷದ ಮಹಿಳೆಗೆ ಮಂಡಿ ಮರುಜೋಡಣೆ :** ಸಿದ್ಧಗಂಗಾ ಆಸ್ಪತ್ರೆಯಲ್ಲಿ ೮೫ ವರ್ಷದ ವೃದ್ಧೆಗೆ ಯಶಸ್ವಿ ಎರಡೂ ಮಂಡಿ ಮರುಜೋಡಣೆ ನಡೆಸಲಾಯಿತು. ಕೀಲುಮೂಳೆ ತಜ್ಞರಾದ ಡಾ.ಆದರ್ಶ್ ಹಾಗೂ ಡಾ.ದೀಪಕ್ ಈ ಯಶಸ್ವಿ ಮಂಡಿ ಮರುಜೋಡಣೆ ನಡೆಸಲಾಯಿತು. ಈ ಕುರಿತು ಮಾತನಾಡಿದ ಡಾ.ಆದರ್ಶ್‌ರವರು "ವಯಸ್ಸಾದಂತೆ ಕೀಲುಮೂಳೆ ಆಪರೇಷನ್ ರೂವಾರಿಗಳು. ಈ ಕುರಿತು ಮಾತನಾಡಿದ ಡಾ.ಆದರ್ಶ್‌ರವರು "ವಯಸ್ಸಾದಂತೆ ಕೀಲುಮೂಳೆ ಸಮಸ್ಯೆಯಾದರೆ ಈ ವಯಸ್ಸಿನಲ್ಲಿ ಆಪರೇಷನ್ ಏತಕ್ಕಾಗಿ? ಎಂದು ಸುಮ್ಮನಿದ್ದು ಬಿಡುತ್ತಾರೆ ಆದರೆ ಆಂಧ್ರಪ್ರದೇಶದ







ಮಡಕಶಿರಾದಿಂದ ಬಂದ ಈ ವೃದ್ಧೆ ಆಪರೇಷನ್ ಮಾಡಿಸಿಕೊಂಡು ವೃದ್ಧರಿಗೆ ಮಾದರಿಯಾಗಿದ್ದಾರೆ ಜೊತೆಗೆ ಯಾರ ಸಹಾಯವೂ ಇಲ್ಲದಂತೆ ನಡೆಯುತ್ತಿದ್ದಾರೆ" ಎಂದರು.

### ವಿಶ್ವ ಕ್ಯಾನ್ಸರ್ ದಿನದ ವಿಶೇಷ ಪ್ಯಾಕೇಜ್ ಚಿಕಿತ್ಸೆ

ನವೆಂಬರ್ ೧ ರಂದು, ವಿಶ್ವ ಕ್ಯಾನ್ಸರ್ ದಿನದ ಅಂಗವಾಗಿ ಮಹಿಳೆಯರಲ್ಲಿ ಹೆಚ್ಚುತ್ತಿರುವ  ಕ್ಯಾನ್ಸರ್ ಹಾಗೂ ಅದರ ಅಪಾಯಗಳನ್ನು ಅರ್ಥಮಾಡಿಸಿ ಅರಿವು ಮೂಡಿಸುವ ನಿಟ್ಟಿನಲ್ಲಿ ಸಿದ್ಧಗಂಗಾ ಆಸ್ಪತ್ರೆಯ ಕ್ಯಾನ್ಸರ್ ಕ್ಲೀನಿಕ್‌ನಲ್ಲಿ ನವೆಂಬರ್ ೦೧ ರಿಂದ ನವೆಂಬರ್ ೩೦ ವರೆಗೆ  ಕೇವಲ ರ್೯೯ ರೂಗಳಿಗೆ ಕ್ಯಾನ್ಸರ್ ತಪಾಸಣೆ ಶಿಬಿರ ಆರಂಭವಾಯಿತು. ಇತ್ತೀಚಿನ ದಿನಗಳಲ್ಲಿ  ಬ್ರೆಸ್ಟ್, ಸರ್ವೈಕಲ್, ಓವರಿಯನ್, ಯುಟೇರಿಯನ್ ಸೇರಿದಂತೆ ಅನೇಕ ಕ್ಯಾನ್ಸರ್‌ಗಳಿಂದ ಮಹಿಳೆಯರ ಆರೋಗ್ಯ ಹದಗೆಡುತ್ತಿದ್ದು ಪ್ರಸ್ತುತ ನೀಡುತ್ತಿರುವ ಪ್ಯಾಕೇಜ್‌ನಲ್ಲಿ ಕ್ಯಾನ್ಸರ್ ಪತ್ತೆ ಹಚ್ಚುವ ಮ್ಯಾಮೋಗ್ರಫಿ, ಪ್ಯಾಪ್‌ಸ್ಮಿಯರ್ ಜೊತೆಗೆ ಸಿಬಿಸಿ, ಆರ್‌ಬಿಎಸ್ ಸೇರಿದಂತೆ ತಜ್ಞ ವೈದ್ಯರ ಸಂದರ್ಶನ ಕೂಡ ನೀಡಲಾಗುತ್ತಿದ್ದು, ೫೦೦ಕ್ಕೂ ಮಹಿಳೆಯರು ಈ ಪ್ಯಾಕೇಜ್‌ನ ಸದುಪಯೋಗಪಡಿಸಿಕೊಂಡರು.

### ಸಿದ್ಧಗಂಗಾ ಆರೋಗ್ಯದಲ್ಲಿ ಕೇಂದ್ರದಲ್ಲಿ ಉಚಿತ ತಪಾಸಣೆ



ನವೆಂಬರ್ ೧ ರ ಕನ್ನಡ ರಾಜ್ಯೋತ್ಸವದ ಅಂಗವಾಗಿ ಸಿದ್ಧಗಂಗಾ ನಗರ ಆರೋಗ್ಯ ಕೇಂದ್ರದಲ್ಲಿ(ಸಿದ್ದರಾಮಣ್ಣ ಕಾಂಪ್ಲೆಕ್ಸ್) ಆಯೋಜಿಸಿರುವ ಉಚಿತ ಆರೋಗ್ಯ ತಪಾಸಣಾ ಶಿಬಿರಕ್ಕೆ ಸಿದ್ಧಗಂಗಾ ಮೆಡಿಕಲ್ ಕಾಲೇಜು ಪ್ರಾಂಶುಪಾಲರಾದ ಡಾ.ಶಾಲಿನಿರವರು ಚಾಲನೆ ನೀಡಿದರು.

ಮಹಾನಗರ ಪಾಲಿಕೆ ಆರೋಗ್ಯ ಸ್ಥಾಯಿ ಸಮಿತಿ ಅಧ್ಯಕ್ಷೆ ವೀಣಾಮನೋಹರಗೌಡ ಮುಖಂಡರಾದ ಜಿಯಾ ಖಾನ್, ಪಾಲಿಕೆ ಸದಸ್ಯರಾದ ದೀಪಶ್ರೀ ಮಹೇಶ್ ಬಾಬು, ಟಿ.ಎಂ.ಮಹೇಶ್, ಮೆಡಿಕಲ್ ಮೇಲ್ವಿಚಾರಕ ಡಾ.ನಿರಂಜನಮೂರ್ತಿ, ಸಿಇಓ ಡಾ.ಸಂಜೀವ್ ಕುಮಾರ್, ಸಿದ್ಧಗಂಗಾ ಆಸ್ಪತ್ರೆಯ ಎಲ್ಲಾ ಸೂಪರ್ ಸ್ಪೆಷಾಲಿಟಿ ಹಾಗೂ ಸ್ಪೆಷಾಲಿಟಿ ವೈದ್ಯರು ಉಪಸ್ಥಿತರಿದ್ದರು. ನವೆಂಬರ್ ೪ ರಿಂದ ೩೦ ವರೆಗೆ ನಡೆದ  ಈ ಶಿಬಿರದಲ್ಲಿ ಸ್ಪೆಷಾಲಿಟಿ ಸೇವೆಗಳಾದ ಕೀಲುಮೂಳೆ, ಇಎನ್‌ಟಿ, ಜನರಲ್ ಸರ್ಜರಿ, ಮಧುಮೇಹ ಸಮಸ್ಯೆಗಳಿಗೆ ವೈದ್ಯರ ಉಚಿತ ಸಂದರ್ಶನದ ಜೊತೆಗೆ ಉಚಿತ ಹೆರಿಗೆ(ನಾರ್ಮಲ್ ಡೆಲಿವರಿ) ನಡೆಯುತ್ತಿದ್ದು ಸುಮಾರು ಒಂದು ಸಾವಿರಕ್ಕೂ ಹೆಚ್ಚು ಜನರು ಈ ಆರೋಗ್ಯ ಶಿಬಿರದ ಪ್ರಯೋಜನ ಪಡೆದುಕೊಂಡರು.

### ಉಚಿತ ಆರೋಗ್ಯ ಶಿಬಿರಗಳು



ನವೆಂಬರ್ ೨೦ ರಂದು, ತುಮಕೂರು ಜಿಲ್ಲಾ ರೈತರ ಮತ್ತು ಎಪಿಎಂಸಿ ನೌಕರ ಹಾಗೂ ಸಾಮಾನ್ಯ ಕಲ್ಯಾಣ ಟ್ರಸ್ಟ್, ಹಾಗೂ ಸಿದ್ಧಗಂಗಾ ವೈದ್ಯಕೀಯ ಮಹಾ ವಿದ್ಯಾಲಯ ಮತ್ತು ಸಂಶೋಧನಾ ಸಂಸ್ಥೆ, ಕೆಎಂಎಫ್  ಸಹಯೋಗದಲ್ಲಿ ಗುಬ್ಬಿ ತಾಲೂಕಿನ ಜಿ. ಹೊಸಹಳ್ಳಿಯ ಶಾಲಾ ಆವರಣದಲ್ಲಿ ಉಚಿತ ಅರೋಗ್ಯ ತಪಾಸಣಾ ಶಿಬಿರ ನಡೆಸಲಾಯಿತು, ಶಿಬಿರದಲ್ಲಿ ೭೦೦ ಕ್ಕೂ ಹೆಚ್ಚು ಮಂದಿಗೆ ಬಿಪಿ, ಶುಗರ್, ನೇತ್ರ ತಪಾಸಣೆ, ಕೀಲು ಮತ್ತು ಮೂಳೆ, ಹೃದಯ ಸಂಬಂಧಿ ಹಾಗೂ ಇನ್ನಿತರ ಕಾಯಿಲೆಗಳ ತಪಾಸಣೆ ನಡೆಸಿ ಔಷಧಿ ನೀಡಲಾಯಿತು,







ನವೆಂಬರ್ ೧೪ ರಂದು, ವಿಶ್ವ ಮಧುಮೇಹ ದಿನದ ಅಂಗವಾಗಿ ತುಮಕೂರು ತಾಲ್ಲೂಕಿನ ಸ್ವಾಂದೇನಹಳ್ಳಿ ಗ್ರಾಮದಲ್ಲಿ ಜನಸಾಮಾನ್ಯರಿಗೆ ಉಚಿತ ಆರೋಗ್ಯ ಶಿಬಿರ ಹಾಗೂ ಸಕ್ಕರೆ ಖಾಯಿಲೆ ಅರಿವು ಕಾರ್ಯಕ್ರಮ ಆಯೋಜಿಸಲಾಗಿತ್ತು. ನಮ್ಮ ಆಸ್ಪತ್ರೆ ಡಯಟೀಷಿಯನ್ ಸಿದ್ಧರಾಜು ಸಾರ್ವಜನಿಕರಿಗೆ ಸಕ್ಕರೆ ಖಾಯಿಲೆ ತಡೆಗಟ್ಟುವ ಆಹಾರ ಕ್ರಮಗಳ ಬಗ್ಗೆ ಮಾಹಿತಿ ನೀಡಿದರು.




ನವೆಂಬರ್ ೧೩ ರಂದು, ಸಿದ್ಧಗಂಗಾ ಮಠದಲ್ಲಿ ಅಖಿಲ ಭಾರತ ವೀರಶೈವ ಮಹಾಸಭಾ ವತಿಯಿಂದ ನಡೆದ ವಿಭಾಗೀಯ ಮಟ್ಟದ ಕಾರ್ಯಾಗಾರ ಹಾಗೂ ವಸ್ತುಪ್ರದರ್ಶನದಲ್ಲಿ (ನ.೧೩ ಹಾಗೂ ೧೪) ಸಿದ್ಧಗಂಗಾ ಆಸ್ಪತ್ರೆ ವತಿಯಿಂದ ಆರೋಗ್ಯ ಜಾಗೃತಿ ಹಾಗೂ ತಪಾಸಣಾ ಶಿಬಿರ ನಡೆಯಿತು.ಸುಮಾರು ೨ ಸಾವಿರಕ್ಕೂ ಹೆಚ್ಚು ಜನರು ಆರೋಗ್ಯ ತಪಾಸಣೆಯಲ್ಲಿ ಪಾಲ್ಗೊಂಡರು.

ನವೆಂಬರ್ ೧೭ ರಂದು, ತುಮಕೂರು ನಗರದ ವಾರ್ಡ್ ನಂ ೩೦ರ ಭಗತ್‌ಸಿಂಗ್ ಆಟೋ ನಿಲ್ದಾಣದವರ ಸಹಕಾರದಲ್ಲಿ ನವೆಂಬರ್ ೧೭ ರಂದು ಉಚಿತ ರಕ್ತದೊತ್ತಡ ಹಾಗೂ ಮಧುಮೇಹ ತಪಾಸಣಾ ಶಿಬಿರ ನಡೆಸಲಾಯಿತು.

ನವೆಂಬರ್ ೦೭ ರಂದು, ಸಿದ್ಧಗಂಗಾ ಆಸ್ಪತ್ರೆಯಿಂದ ವಿಶ್ವಕ್ಯಾನ್ಸರ್ ದಿನದ ಅಂಗವಾಗಿ ಧಾನ್ ಫೌಂಡೇಶನ್ ಸಹಯೋಗದಲ್ಲಿ ಕೊರಟಗೆರೆ ತಾಲ್ಲೂಕಿನ ರೊಳ್ಳೆಪಾಳ್ಯದಲ್ಲಿ ಮಹಿಳೆಯರಿಗಾಗಿ ಕ್ಯಾನ್ಸರ್ ಕುರಿತು ಅರಿವು ಕಾರ್ಯಕ್ರಮ ನಡೆಯಿತು. ಸಿದ್ಧಗಂಗಾ ಆಸ್ಪತ್ರೆಯ  ಕ್ಯಾನ್ಸರ್ ರೋಗ ತಜ್ಞರಾದ ಡಾ. ಮಧುಮಾಲತಿರವರು ಮಹಿಳೆಯರಿಗೆ  ರೋಗಗಳ ಕುರಿತು ಮಾಹಿತಿ ನೀಡಿದರು.

ನವೆಂಬರ್ ೧ ರಂದು, ಸಿದ್ಧಗಂಗಾ ಆಸ್ಪತ್ರೆಯಲ್ಲಿ ೬೭ನೇ ಕನ್ನಡ ರಾಜ್ಯೋತ್ಸವ ಧ್ವಜಾರೋಹಣ ಕಾರ್ಯಕ್ರಮ ನಡೆಯಿತು. ಕ್ಯಾನ್ಸರ್‌ನಿಂದ ಗುಣಮುಖರಾದ ಶ್ರೀಮತಿ ಸಿದ್ಧಗಂಗಮ್ಮ ಧ್ವಜಾ ರೋಹಣ ನೆರವೇರಿಸಿದರು. ಸಿದ್ಧಗಂಗಾ ಆಸ್ಪತ್ರೆ ನಿರ್ದೇಶಕ ಡಾ.ಎಸ್.ಪರಮೇಶ್, ಸಿದ್ಧಗಂಗಾ ಮೆಡಿಕಲ್ ಕಾಲೇಜು ಪ್ರಾಂಶುಪಾಲರಾದ ಡಾ.ಶಾಲಿನಿ ಮಾತನಾಡಿದರು. ಸಿದ್ಧಗಂಗಾ ಮೆಡಿಕಲ್ ಕಾಲೇಜು ಮೇಲ್ವಿಚಾರಕ ಡಾ.ನಿರಂಜನಮೂರ್ತಿ, ಸಿಇಓ ಡಾ.ಸಂಜೀವ್ ಕುಮಾರ್, ಕ್ಯಾನ್ಸರ್ ತಜ್ಞರಾದ ಡಾ.ಮಧುಮಾಲಿತಿ, ಸ್ತ್ರೀರೋಗ ತಜ್ಞರಾದ ಡಾ.ಮನಸ್ವಿ, ರೂಪ, ಪಿಆರ್‌ಓ ಕಾಂತರಾಜು ಹಾಗೂ ಆಸ್ಪತ್ರೆ ಸಿಬ್ಬಂದಿ ಉಪಸ್ಥಿತರಿದ್ದರು




ಅಕ್ಟೋಬರ್ ೩೦ ರಂದು, ಸಿದ್ಧಗಂಗಾ ಮೆಡಿಕಲ್ ಕಾಲೇಜು  ಹಾಗು ತುಮಕೂರು ಮಹಾನಗರ ಪಾಲಿಕೆ ವಾರ್ಡ್ ನಂ೨೬ರ ಸಹಯೋಗದಲ್ಲಿ ಅಕ್ಟೋಬರ್೩೦ ಭಾನುವಾರದಂದು ಬೆಳಗ್ಗೆ ೬:೩೦ ರಿಂದ ೯:೩೦ರ ವರೆಗೆ  ನಗರದ ಅಜಾದ್ ಪಾರ್ಕ್ ನಲ್ಲಿ ಉಚಿತ ಅರೋಗ್ಯ ತಪಾಸಣಾ ಶಿಬಿರ ನಡೆಸಲಾಯಿತು, ಶಿಬಿರದಲ್ಲಿ ಅಶೋಕನಗರದ ನಾಗರಿಕರು ಹಾಗೂ ಅಕ್ಕ ಪಕ್ಕದ ವಾರ್ಡ್‌ನ ನಾಗರೀಕರು ಅರೋಗ್ಯ ಶಿಬಿರದಲ್ಲಿ ಭಾಗಿಯಾಗಿದ್ದರು.





## ಸಿದ್ಧಗಂಗಾ ಆಸ್ಪತ್ರೆಗೆ ತಜ್ಞವೈದ್ಯರ ಸೇರ್ಪಡೆ



**ಡಾ.ಸಂಕಲ್ಪ್, ನ್ಯೋರೋಲಾಜಿಸ್ಟ್ :** ನರರೋಗ ವಿಭಾಗಕ್ಕೆ ಆಗಮಿಸಿರುವ ನ್ಯೂರಾಲಜಿಸ್ಟ್ ಡಾ.ಸಂಕಲ್ಪವರು, ಬಳ್ಳಾರಿಯ ವಿಜಯನಗರ ಇನ್ಸಿಟ್ಯೂಟ್ ಆಫ್ ಮೆಡಿಕಲ್ ಸೈನ್ಸ್‌ನಲ್ಲಿ ವೈದ್ಯಕೀಯ ಪದವಿ ಪಡೆದು, ಆಸ್ಸಾಂ ಮೆಡಿಕಲ್ ಕಾಲೇಜಿನಲ್ಲಿ ಸರ್ಜರಿ ವಿಭಾಗದಲ್ಲಿ ಸ್ನಾತಕೋತ್ತರ ವೈದ್ಯಕೀಯ ಪದವಿ ಪೂರೈಸಿ, ಬೆಂಗಳೂರು ಮೆಡಿಕಲ್ ಕಾಲೇಜಿನಲ್ಲಿ ನರರೋಗ ಶಸ್ತ್ರಚಿಕಿತ್ಸಾ ವಿಭಾಗದಲ್ಲಿ ಸೂಪರ್ ಸ್ಪೆಷಾಲಿಟಿ ಪದವಿ ಪಡೆದಿದ್ದಾರೆ.

ನರರೋಗ ಸಮಸ್ಯೆಗಳಲ್ಲಿ ಕಂಡುಬರುವ ಟ್ರೋಮಾ,ಬ್ರೇನ್ & ಸ್ಪೈನಲ್‌ಕಾರ್ಡ್ ಇಂಜುರಿ, ಸ್ಟ್ರೋಕ್ &ಇಂಟ್ರಾಕ್ರೇನಿಯಲ್ ಬ್ಲೀಡ್ ಸಮಸ್ಯೆಗಳ ಜೊತೆಗೆ ಬ್ರೇನ್, ಸ್ಪೈನ್ ಟ್ಯೂಮರ್ ಹಾಗೂ ಸರ್ವೈಕಲ್ ಸ್ಪಾಂಡಿಲೋಸಿಸ್ ಚಿಕಿತ್ಸೆಗಳಲ್ಲಿ ಪರಿಣಿತಿ ಪಡೆದಿದ್ದು, ಪ್ರಸ್ತುತ ಸಿದ್ಧಗಂಗಾ ಸೂಪರ್ ಸ್ಪೆಷಾಲಿಟಿಯ ವಿಭಾಗದಲ್ಲಿ ಪೂರ್ಣಾವಧಿಯ ನರರೋಗ ಶಸ್ತ್ರಚಿಕಿತ್ಸಾ ತಜ್ಞರಾಗಿ ೨೪ ಗಂಟೆಯೂ ಲಭ್ಯವಿರಲಿದ್ದಾರೆ.



**ಡಾ.ಕುಶಾಲ್, ಮೂತ್ರಪಿಂಡ ತಜ್ಞರು :** ಮೂತ್ರಪಿಂಡ ರೋಗ ವಿಭಾಗಕ್ಕೆ ಆಗಮಿಸಿರುವ ನೆಫ್ರಾಲಜಿಸ್ಟ್ ಡಾ.ಕುಶಾಲ್‌ರವರು ಬೆಂಗಳೂರಿನ ಮೆಡಿಕಲ್ ಕಾಲೇಜಿನಲ್ಲಿ ವೈದ್ಯಕೀಯ ಪದವಿ ಪಡೆದು, ಬಳ್ಳಾರಿಯ ವಿಜಯನಗರ ಮೆಡಿಕಲ್ ಕಾಲೇಜಿನಲ್ಲಿ ಜನರಲ್ ಮೆಡಿಸಿನ್ ವಿಭಾಗದಲ್ಲಿ ಸ್ನಾತಕೋತ್ತರ ಪದವಿ ಪಡೆದು, ದೇಶದ ಪ್ರತಿಷ್ಠಿತ ಅಟಲ್ ಬಿಹಾರಿ ವಾಜಪೇಯಿ ಮೆಡಿಕಲ್ ಕಾಲೇಜಿನಲ್ಲಿ ನೆಫ್ರಾಲಜಿ ವಿಭಾಗದಲ್ಲಿ ಡಿಎಂ ಪದವಿ ಪಡೆದಿದ್ದಾರೆ. ಕಿಡ್ನಿ ಸಮಸ್ಯೆಗಳಾದ ಕ್ರೋನಿಕ್ ಕಿಡ್ನಿ ಡಿಸೀಸ್, ಕಿಡ್ನಿ ಟ್ರಾನ್ಸ್‌ಪ್ಲಾಂಟೇಷನ್, ಡಯಾಬೆಟಿಕ್ ರೀನಲ್ ಫೇಲ್ಯೂರ್, ಹೀಮೋಡಯಾಲಿಸಿಸ್ ವಿಭಾಗದಲ್ಲಿ ಪರಿಣಿತಿ ಪಡೆದಿದ್ದು ಪ್ರಸ್ತುತ ಸಿದ್ಧಗಂಗಾ ಆಸ್ಪತ್ರೆಯಲ್ಲಿ ಪೂರ್ಣಾವಧಿಯ ನೆಫ್ರಾಲಜಿಸ್ಟ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ.



**ಡಾ. ಟಿ.ನಳಿನಾರವರು ಜನರಲ್ ಮೆಡಿಸಿನ್ ಪ್ರೊಫೆಸರ್ :** ಸಿದ್ಧಗಂಗಾ ಮೆಡಿಕಲ್ ಕಾಲೇಜು ವಿಭಾಗದ ಪ್ರೊಫೆಸರ್ ಆಗಿ ನೇಮಕಗೊಂಡಿರುವ ಡಾ.ನಳಿನಾರವರು ಬೆಂಗಳೂರು ಮೆಡಿಕಲ್ ಕಾಲೇಜಿನಲ್ಲಿ ಎಂಬಿಬಿಎಸ್ ಪದವಿ ಪಡೆದು, ಜನರಲ್ ಮೆಡಿಸಿನ್‌ನಲ್ಲಿ ಡಿಎನ್‌ಬಿ ಪೂರೈಸಿದ್ದಾರೆ. ಪ್ರಾಧ್ಯಾಪಕ ವೃತ್ತಿಯಲ್ಲಿ ಆಸಕ್ತಿ ಹೊಂದಿದ್ದ ಡಾ.ನಳಿನಾರವರು ಅನೇಕ ಮೆಡಿಕಲ್ ಕಾಲೇಜಿನಲ್ಲಿ ಅಸಿಸ್ಟೆಂಟ್ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ್ದಾರೆ. ಚಿತ್ರದುರ್ಗದ ಬಸವೇಶ್ವರ ಮೆಡಿಕಲ್ ಕಾಲೇಜಿನಲ್ಲಿ ಪ್ರೊಫೆಸರ್ ಆಗಿ ಕರ್ತವ್ಯ ನಿರ್ವಹಿಸಿದ ಅನುಭವವುಳ್ಳ ಡಾ.ನಳಿನಾ, ಜೀವರಕ್ಷದ ಇಸಿಎಲ್‌ಎಸ್ ಕಾರ್ಯಕ್ರಮಕ್ಕೆ ಸೀನಿಯರ್ ಟ್ರೇನರ್ ಆಗಿ ಕೂಡ ಸೇವೆಯನ್ನು ಸಲ್ಲಿಸುತ್ತಿದ್ದಾರೆ.

ಡಾ. ಟಿ. ನಳಿನಾ ರವರು ಇನ್ನುಮುಂದೆ ಸಿದ್ಧಗಂಗಾ ಮೆಡಿಕಲ್ ಕಾಲೇಜಿನಲ್ಲಿ ಜನರಲ್ ಮೆಡಿಸಿನ್ ವಿಭಾಗದಲ್ಲಿ ಪ್ರೊಫೆಸರ್ ಆಗಿ ತಮ್ಮ ಅಪಾರ ಅನುಭವ ಹಾಗೂ ಜ್ಞಾನವನ್ನು ವಿದ್ಯಾರ್ಥಿಗಳಿಗೆ ಹಂಚಲಿದ್ದಾರೆ. ಈ ಮೂರು ಜನ ತಜ್ಞವೈದ್ಯರನ್ನು ಸಿದ್ಧಗಂಗಾ ವೈದ್ಯಕೀಯ ಮಹಾವಿದ್ಯಾಲಯ ಹಾಗೂ ಸಂಶೋಧನಾ ಸಂಸ್ಥೆ ಹೆಮ್ಮೆಯಿಂದ ಸ್ವಾಗತಿಸುತ್ತಿದೆ.

ವರದಿ : ಕಾಂತರಾಜು, ಪಿಆರ್‌ಓ





ನುಡಿನಮನ

# ಬಹಮುಖ ಪ್ರತಿಭೆಯ ಪ್ರೊ॥ ಟಿ.ಎಸ್. ಲೋಹಿತಾಶ್ವರವರು

– ಎಸ್. ಕುಮಾರಸ್ವಾಮಿ
ನಿವೃತ್ತ ಪ್ರಾಚಾರ್ಯರು, ತೊಂಡಗೆರೆ



ನಿವೃತ್ತ ಆಂಗ್ಲಭಾಷಾ ಪ್ರಾಧ್ಯಾಪಕ, ನಾಟಕಕಾರ, ನಟ, ನಿರ್ದೇಶಕ, ಸಾಹಿತ್ಯ ರಚನೆಕಾರ ಪ್ರೊ. ಟಿ.ಎಸ್. ಲೋಹಿತಾಶ್ವರು ನವೆಂಬರ್ ೮ ರಂದು ವಿಧಿವಶರಾದರು ಎಂದು ತಿಳಿಸಲು ಸಿದ್ಧಗಂಗಾ ವಿಷಾದಿಸುತ್ತದೆ. ಅವರಿಗೆ ೮೦ ವರ್ಷವಾಗಿತ್ತು.

ಪಟೇಲ್ ಸಿದ್ಧವೀರಪ್ಪನವರು ಶ್ರೀ ಸಿದ್ಧಗಂಗಾ ಮಠದ ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರ ಪರಮ ಭಕ್ತರು. ಶ್ರೀಕ್ಷೇತ್ರದ ಯಾವುದೇ ಸಭೆ ಸಮಾರಂಭಗಳಿಗೆ ತಪ್ಪದೇ ಶಿಸ್ತಿನಿಂದ ಹಾಜರಿದ್ದು ಶ್ರೀ ಶ್ರೀಗಳವರ ಆಶೀರ್ವಾದ ಪಡೆದು ಹೋಗುವ ಪರಿಪಾಟ ಅವರದಾಗಿತ್ತು. ಶ್ರೀಕ್ಷೇತ್ರದ ಜಾತ್ರೆ, ಹಬ್ಬ ಹರಿದಿನಗಳಲ್ಲಿ ತಮ್ಮ ಊರಿನ ಕಡೆಯಿಂದ ಧಾನ್ಯಗಳನ್ನು ಸಂಗ್ರಹಿಸಿ, ದಾಸೋಹಕ್ಕೆ ತಂದು ಒಪ್ಪಿಸುತ್ತಿದ್ದ ಶ್ರದ್ಧೆಯ ಮಹಾ ಶರಣರಾಗಿದ್ದರು. ಇವರಿಗೆ ಒಟ್ಟು ೧೪ ಜನ ಮಕ್ಕಳು. ೧೦ ಜನ ಹೆಣ್ಣು ಮಕ್ಕಳು, ೪ ಜನ ಗಂಡು ಮಕ್ಕಳು.

ತುಮಕೂರು ತಾಲ್ಲೋಕು ತೊಂಡಗೆರೆಯ ಶ್ರೀಮತಿ ಭದ್ರಮ್ಮ, ಪಟೇಲ್ ಶ್ರೀ ಸಿದ್ಧವೀರಪ್ಪನವರ ಸುಪುತ್ರರಾಗಿ ದಿನಾಂಕ ೦೫-೦೮-೧೯೪೨ ಲೋಹಿತಾಶ್ವರವರು ಜನಿಸಿದರು. ಅವರ ಮನೆಯಲ್ಲಿ ಅಕ್ಕರೆಯ ಹೆಸರು ರೇಣುಕಪ್ಪ. ಊರಿನ ಮಂದಿಗೆಲ್ಲ ರೇಣುಕಣಯ್ಯ ಅಂದರೇ ಅರ್ಥವಾಗುತ್ತಿತ್ತು. ಪ್ರಾಥಮಿಕ ಶಾಲೆಯಿಂದಲೇ ಅತಿಯಾದ ಚುರುಕು, ಓದಿನಲ್ಲಿ ಮುಂದು. ಕನ್ನಡ ಕಲಿಕೆಯಲ್ಲಿ ಅದಮ್ಯ ಶ್ರದ್ಧೆ; ತಪ್ಪಿಲ್ಲದ ಬರವಣಿಗೆ, ಓದುವುದು, ಮುದ್ದಾದ ಅಕ್ಷರಗಳಿಂದ ಕೂಡಿದ ಬರಹ. ಇವರು ತುಮಕೂರಿನ ಪ್ರಥಮ ದರ್ಜೆ ಕಾಲೇಜಿನ ಇಂಗ್ಲೀಷ್ ಪ್ರಾಧ್ಯಾಪಕರಾಗಿದ್ದಾಗ ನನಗೆ ಇಂಗ್ಲೀಷ್ ಗುರುಗಳು (೧೯೭೮-೭೯).

ತುಮಕೂರಿನಲ್ಲಿ ಪಿ.ಯು.ಸಿ. ಮತ್ತು ಪದವಿ ಮುಗಿಸಿ, ಮೈಸೂರಿನ ಮಾನಸ ಗಂಗೋತ್ರಿಯಲ್ಲಿ ಇಂಗ್ಲೀಷ್ ಎಂ.ಎ. ಪದವಿಯನ್ನು ಉನ್ನತ ದರ್ಜೆಯಿಂದ ಉತ್ತೀರ್ಣರಾಗಿ ಮೊದಲಿಗೆ ಚಿತ್ರದುರ್ಗದ ಸರ್ಕಾರಿ ಪದವಿ ಕಾಲೇಜಿನಲ್ಲಿ ವೃತ್ತಿ ಆರಂಭಿಸಿ, ತುಮಕೂರು, ಬೆಂಗಳೂರು ಮಹಾರಾಣಿ ಕಾಲೇಜು, ವಿಜ್ಞಾನ ಕಾಲೇಜು, ದೇವನಹಳ್ಳಿ ಪದವಿ ಕಾಲೇಜುಗಳಲ್ಲಿ ಸೇವೆ. ಗುಲ್ಬರ್ಗಾ ಪದವಿ ಕಾಲೇಜಿಗೆ ವರ್ಗವಾದಾಗ ದೂರವೆಂದು ಮತ್ತು ಅವರ ನಾಟಕ ಚಟುವಟಿಕೆಗಳು ನಿಲ್ಲುತ್ತವೆಂದು ಅಲ್ಲಿಗೆ ಹೋಗದೆ, ಗೈರು ಹಾಜರಾಗಿದ್ದರು. ಆದರೆ ಸರ್ಕಾರ ಇವರ ಪ್ರತಿಭೆ ಗಮನಿಸಿ ಗೆಳೆಯರ ಸಹಕಾರದಿಂದ ಬೆಂಗಳೂರಿಗೆ ವರ್ಗಾವಣೆಗೊಂಡರು. ವಿವಿಧ ಕಾಲೇಜುಗಳಲ್ಲಿ ಒಟ್ಟು ೩೩ ವರ್ಷ ಬೋಧನೆ ಮಾಡಿ ಅಂತಿಮವಾಗಿ ಕೆ.ಆರ್.ಪುರಂ ಪದವಿ ಕಾಲೇಜಿನಲ್ಲಿ ಪ್ರಾಚಾರ್ಯರಾಗಿ ನಿವೃತ್ತಿಯಾದರು.

ಪ್ರಾಧ್ಯಾಪಕ ವೃತ್ತಿಯ ಜೊತೆ ಕಲಾ ಕ್ಷೇತ್ರದಲ್ಲಿ ಹೆಸರು ಮಾಡಿದರು. ಪಿ.ಯು.ಸಿ. ನಂತರ ಕೆಲವು ಕಾಲ ಊರಿನಲ್ಲಿ ಬೇಸಾಯದ ಪಕ್ಕಾ ಅನುಭವ ಪಡೆದರು. ರೈತರ, ಕಾರ್ಮಿಕರ ಜೊತೆ ಅತ್ಯಂತ ಪ್ರೀತಿಯಿಂದ ಎಲ್ಲಾ ಕೆಲಸಗಳನ್ನು ಮಾಡುತ್ತ ಕಾರ್ಮಿಕರಿಗೆ ಅಚ್ಚುಮೆಚ್ಚಾದರು. ಅವರು ಊರಿಗೆ ಬಂದರೆ ಜನರೆಲ್ಲ ರೇಣುಕಣಯ್ಯ ಬಂದವ್ರೆ ಅಂತ ಖುಷಿಯಿಂದ ಅವರ ಜೊತೆ ಬದುಕಿನ ಅನುಭವ ಹಂಚಿಕೊಳ್ಳುತ್ತಿದ್ದರು. ಕೆಲಸದ ಬಿಡುವಿನ ವೇಳೆ ಚಿತ್ರ ಬರೆಯೋದು, ಲೇಖನಗಳನ್ನು ಬರೆಯೋ ಹವ್ಯಾಸ ಬೆಳೆಸಿಕೊಂಡರು. ಓದುವ ಮಕ್ಕಳಿಗೆ ಪಾಠ ಹೇಳಿಕೊಡುತ್ತಾ ಧೈರ್ಯ ತುಂಬುತ್ತಿದ್ದರು. ರಾಮಾಯಣ, ಮಹಾಭಾರತ, ಪುರಾಣ ಕಥೆಗಳ ಸ್ವರೂಪಗಳನ್ನು ವಿಶೇಷವಾಗಿ ಅರ್ಥೈಸಿ ವಿವರ ನೀಡುತ್ತಿದ್ದರು.

ತುಮಕೂರಿನ ಪದವಿ ಅಭ್ಯಾಸದ ವೇಳೆ ಡಾ. ಸಾ.ಶಿ. ಮರುಳಯ್ಯನವರ 'ಮರಿಬೇಡಿ' ನಾಟಕದಲ್ಲಿ ಪಾತ್ರ ಮಾಡಿ ಪ್ರಾಚಾರ್ಯರು ಮತ್ತು ಅಧ್ಯಾಪಕರ ಮೆಚ್ಚುಗೆಗಳಿಸಿದರು. ಪ್ರತಿ ಹಂತದಲ್ಲೂ ಸಾಹಸಿಯಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಆಗಲೆ




ಅವರ ಸಮಾಜಮುಖಿ ಚಿಂತನೆ ಬೆಳಕಿಗೆ ಬಂದಿತ್ತು. ನ್ಯಾಯ, ಅನ್ಯಾಯಗಳ ವಿರುದ್ಧ ಚಿಂತನೆ, ಪ್ರತಿಭಟನೆ, ಸ್ವಾಭಿಮಾನದ ಬದುನ್ನು ಕಟ್ಟಿಕೊಂಡರು.

ತುಮಕೂರಿನಲ್ಲಿ ಸಮುದಾಯ ನಾಟಕ ಕೇಂದ್ರದ ನಿರ್ದೇಶಕರಾಗಿ ಹಲವಾರು ಯುವ ಕಲಾವಿದರನ್ನು, ಮಿತ್ರರನ್ನು ನಾಟಕದ ಗೀಳಿಗೆ ತಂದರು. ಪಂಚಮ, ಕತ್ತಲೆದಾರಿ ದೂರ, ಬೆಲ್ಚಿ, ಚೋರ ಚರಣದಾಸ, ಮೆರವಣಿಗೆ, ಮುಖ್ಯಮಂತ್ರಿ ಮುಂತಾದ ನಾಟಕಗಳನ್ನು ಬೀದಿ ನಾಟಕದ ಸ್ವರೂಪದಲ್ಲಿ ಸೃಜನಾತ್ಮಕತೆಯಲ್ಲಿ ರಚಿಸಿ, ನಿರ್ದೇಶಿಸಿದರು. ಸಾಹಿತ್ಯ, ಸಿನೆಮಾ, ರಂಗಭೂಮಿ, ಅಧ್ಯಾಪನ, ಭಾಷಾಂತರ ಕ್ಷೇತ್ರಗಳಲ್ಲಿ ತಮ್ಮನ್ನು ಪೂರ್ಣಾವಧಿ ತೊಡಗಿಸಿಕೊಂಡು ಎಲ್ಲರಿಗೂ ಬೇಕಾದವರಾದರು. ಅತಿ ನಿಷ್ಠುರ ಸ್ವಭಾವ, ಕಡಕ್ ಉತ್ತರ, ರಾಜಿ ಆಗುವ ಪ್ರಶ್ನೆಯೇ ಇಲ್ಲದೆ ಕೆಲವರಿಗೆ ಅಪಥ್ಯ ವೆನಿಸಿದರೂ, ಬಹುತೇಕರಿಗೆ ಮೆಚ್ಚುಗೆಯ ವ್ಯಕ್ತಿಯಾಗಿದ್ದರು.

ಇವರು ರಚಿಸಿದ ದೇಶಿ ಕವನ ಸಂಕಲನಗಳಾದ 'ಹೊತ್ತು ಹೋಗುವ ಮುನ್ನ', 'ಅಕ್ಕಡಿ ಸಾಲು', 'ಮೂರು ಮತ್ತೊಂದು' ನಾಟಕಗಳು ಹೊಸತನದಿಂದ ಕೂಡಿದ್ದವು. 'ಮುಖ್ಯಮಂತ್ರಿ' ನಾಟಕವನ್ನು ಹಿಂದಿಯಿಂದ ಕನ್ನಡಕ್ಕೆ ಅನುವಾದಿಸಿದರು. ಆ ನಾಟಕದಲ್ಲಿ ಅವರೇ ಮುಖ್ಯಮಂತ್ರಿ ಪಾತ್ರ ವಹಿಸಬೇಕಾಗಿತ್ತು. ಆದರೆ ಜ್ವರದಿಂದ ಅಭಿನಯಿಸಲಾಗದೆ ನಟ ಚಂದ್ರಶೇಖರ್ ಮುಖ್ಯಮಂತ್ರಿ ಯಾಗಿ ನಟಿಸಿ ಮುಖ್ಯಮಂತ್ರಿ ಚಂದ್ರು ಎಂದೇ ಹೆಸರಾದರು. ತಾನು ಆ ನಾಟಕದಲ್ಲಿ ಪಾತ್ರ ಮಾಡಲಿಲ್ಲವೆಂಬ ಕೊರಗು ಅನೇಕ ಸಾರಿ ಇವರನ್ನು ಕಾಡಿತ್ತು. ಹಲವಾರು ಸಿನೆಮಾಗಳಲ್ಲಿ ಮುಖ್ಯಮಂತ್ರಿ ಮತ್ತು ಪೊಲೀಸ್ ವರಿಷ್ಠಾಧಿಕಾರಿಯ ಪಾತ್ರ ವಹಿಸಿ ಹೆಸರು ಮಾಡಿದರು. ಅವರ ಕಂಚಿನ ಕಂಠ ಆಯಾ ಪಾತ್ರಗಳಿಗೆ ಮೆರುಗು ತಂದಿದ್ದವು.

ಶಂಕರನಾಗ್ ನಿರ್ದೇಶನದ 'ಗೀತಾ' ಚಿತ್ರದಿಂದ ಮೊಟ್ಟಮೊದಲು ಸಿನೆಮಾ ಕ್ಷೇತ್ರಕ್ಕೆ ಪಾದಾರ್ಪಣೆ ಮಾಡಿ, ರಾಜಕುಮಾರ್, ವಿಷ್ಣುವರ್ಧನ್, ಅಂಬರೀಷ್ ಮುಂತಾದ ದಿಗ್ಗಜರ ಜೊತೆ ಅಭಿನಯಿಸಿದ ಕೀರ್ತಿ ಅವರದು. ಇತ್ತೀಚಿನ ಶಿವರಾಜ್‌ಕುಮಾರ್, ಪುನೀತ್, ದರ್ಶನ್, ಸುದೀಪ್ ಮುಂತಾದ ನಟರ ಸಿನೆಮಾಗಳಲ್ಲಿ ಪೋಷಕ ಪಾತ್ರದಿಂದ ಮಿಂಚಿದರು. ೫೦೦ಕ್ಕೂ ಹೆಚ್ಚು ಚಿತ್ರಗಳಲ್ಲಿ, ಕೆಲವು ಧಾರಾವಾಹಿಗಳಲ್ಲಿ ಅಭಿನಯಿಸಿದರು. ಅಂತೆಯೇ ಅವರ ಪುತ್ರ ಶರತ್ ಲೋಹಿತಾಶ್ವ ಕೂಡ ತಂದೆಯಂತೆ ಕಂಚಿನ ಕಂಠ, ಉತ್ತಮ ಪಾತ್ರ ನಿರ್ವಹಣೆಯಿಂದ ಹೆಸರು ಮಾಡಿದ್ದಾರೆ, ತಂದೆಯಂತೆ ಮಗ!

೧೯೭೧ ರಲ್ಲಿ ಹಿರಿಯೂರು ತಾಲ್ಲೂಕು ಬಬ್ಬೂರಿನ ಸಾಹುಕಾರ್ ಸಿದ್ದಪ್ಪ ಮತ್ತು ಚಿಕ್ಕವೀರಮ್ಮ ದಂಪತಿಗಳ ಪುತ್ರಿ ವತ್ಸಲಾರವರ ಜೊತೆ ಮದುವೆಯಾಗಿ, ಶರತ್, ವಿನಯಕುಮಾರಿ ಮತ್ತು ರಾಹುಲ್ ಎಂಬ ಸುಸಂಸ್ಕೃತ ಮಕ್ಕಳನ್ನು ಸಮಾಜಕ್ಕೆ ನೀಡಿದ್ದಾರೆ. ಅವರೂ ಕೂಡ ತಂದೆಯಂತೆ ಅವರವರ ಕ್ಷೇತ್ರದಲ್ಲಿ ಪ್ರತಿಭಾ ಸಂಪನ್ನರಾಗಿ ಬೆಳಗುತ್ತಿದ್ದಾರೆ.

ಪ್ರೊ. ಟಿ.ಎಸ್. ಲೋಹಿತಾಶ್ವ ಅವರು ಶ್ರೀಮಠ ಹಾಗೂ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಬಗ್ಗೆ ಅಪಾರವಾದ ಭಕ್ತಿ ಗೌರವವನ್ನಿಟ್ಟುಕೊಂಡಿದ್ದರು. ಪೂಜ್ಯರನ್ನು ಕುರಿತಂತೆ ಕೃತಿಯನ್ನು ರಚಿಸಿ ಲೋಕಾರ್ಪಣೆ ಮಾಡಿದ್ದರು.

ಬಹುಮುಖ ಪ್ರತಿಭೆಯಿಂದ ಬೆಳಗಿದ ಪ್ರೊ॥ ಲೋಹಿತಾಶ್ವರವರು ಒಬ್ಬ ಮಾನವತಾವಾದಿಯಾಗಿ ಚಿಂತಕರಾಗಿದ್ದು ನಮ್ಮನ್ನು ಅಗಲಿದ್ದಾರೆ. ಆದರೆ ಅವರ ಕಲಾ ಪ್ರತಿಭೆ ಅಚ್ಚಳಿಯದೆ ಉಳಿದಿದೆ. ಮೃತರ ಆತ್ಮಕ್ಕೆ ಚಿರಶಾಂತಿ ಯನ್ನು, ಕುಟುಂಬದವರಿಗೆ ಅವರ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ಬಸವಾದಿ ಶರಣರು ಹಾಗೂ ಶ್ರೀ ಸಿದ್ಧಗಂಗಾ ಗುರುಪರಂಪರೆ ನೀಡಲಿ ಎಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.



ವರದಿ

# ರೆಡಿ ಆನ್ ವೀಲ್ಸ್ (ROW) ಅಪ್ಲಿಕೇಶನ್ ಲೋಕಾರ್ಪಣೆ




ಸಿದ್ದಗಂಗಾ ಮಠದ ಶ್ರೀ ಶ್ರೀ ಸಿದ್ದಲಿಂಗ ಮಹಾಸ್ವಾಮಿಗಳು, ಶ್ರೀ ವಿದ್ಯಾಚೌಡೇಶ್ವರಿ ಪೀಠಾಧಿಪತಿಗಳಾದ ಪೂಜ್ಯ ಶ್ರೀ ಶ್ರೀ ಬಾಲಮಂಜುನಾಥ ಸ್ವಾಮಿಗಳು ಮತ್ತು ಅವಧೂತ ಶ್ರೀ ವಿನಯ್ ಗುರೂಜಿ ಸಾನ್ನಿಧ್ಯದಲ್ಲಿ ರೆಡಿ ಆನ್ ವೀಲ್ಸ್ - ಜನರ ಪ್ರಯಾಣ ಮತ್ತು ಸಾರಿಗೆ ಅಗತ್ಯಗಳನ್ನು ಪೂರೈಸುವ ಹೊಸದಾಗಿ ಪ್ರಾರಂಭಿಸಲಾದ ಸಂಸ್ಥೆಯ ಹೊಸ ಅಪ್ಲಿಕೇಶನ್ ಅನ್ನು ನಟ ಹಾಗೂ ಸಂಸ್ಥೆಯ ರಾಯಭಾರಿ ಧ್ರುವಸರ್ಜಾ ಅವರು ಬೆಂಗಳೂರಿನಲ್ಲಿ ಬಿಡುಗಡೆ ಮಾಡಿದರು. ಈ ಸಂದರ್ಭದಲ್ಲಿ ಸಚಿವರಾದ ಶ್ರೀ ಜೆ.ಸಿ. ಮಾಧುಸ್ವಾಮಿ, ನಟ ಪ್ರಥಮ್ ಸೇರಿದಂತೆ ರಾಜಕೀಯ ಮತ್ತು ಚಿತ್ರರಂಗದ ಗಣ್ಯರು ಉಪಸ್ಥಿತರಿದ್ದರು.

ಈ ಕಾರ್ಯಕ್ರಮದಲ್ಲಿ ಪದ್ಮಶ್ರೀ ಪುರಸ್ಕೃತರಾದ ಸಾಲುಮರದ ತಿಮ್ಮಕ್ಕ ಮತ್ತು ಹರೇಕಳ ಹಾಜಬ್ಬನವರನ್ನು ಗಂಧದಗುಡಿ ಟ್ರಸ್ಟ್‌ನಿಂದ ಗೌರವ ಪೂರ್ವಕವಾಗಿ ಸನ್ಮಾನಿಸಲಾಯಿತು. ಇದೇ ಸಂದರ್ಭದಲ್ಲಿ ಕನ್ನಡ ಚಿತ್ರರಂಗದಲ್ಲಿ ಸಾಧನೆಗೈದ ಡಾ.ಲೀಲಾವತಿ, ಶ್ರೀ ಎಮ್.ಎಸ್.ಉಮೇಶ್, ಶ್ರೀ ರಮೇಶ್ ಭಟ್, ಶ್ರೀಮತಿ ಅಪೂರ್ವ, ಶ್ರೀ ಡಿಂಗ್ರಿ ನಾಗರಾಜ್, ಶ್ರೀ ಗಣೇಶ್ ರಾವ್ ಕೆಸರ್ಕರ್ ಮತ್ತು ಶ್ರೀ ದಯಾನಂದ್ ಸಾಗರ್ ತಿಪಟೂರು ಅವರನ್ನು ಸನ್ಮಾನಿಸಲಾಯಿತು. ಜೊತೆಗೆ ಪತ್ರಿಕೋದ್ಯಮದಲ್ಲಿ ಹಲವು ದಶಕಗಳ ಕಾಲ ಸೇವೆ ಸಲ್ಲಿಸಿದ ರಾಜ್ಯ ಕಾರ್ಯನಿರತ ಪತ್ರಕರ್ತ ಸಂಘದ ಅಧ್ಯಕ್ಷರಾದ ಶ್ರೀ ಶಿವಾನಂದ ತಗಡೂರು ಅವರನ್ನು ಸನ್ಮಾನಿಸಲಾಯಿತು.

ಯಾವುದೇ ಸೇವಾ ಶುಲ್ಕಗಳು ಮತ್ತು ಭಾರೀ ಕಮಿಷನ್ ಇಲ್ಲದೆ, ಸುಧಾರಿತ, ಫೂಲ್‌ಫ್ರೂಫ್ ವ್ಯವಸ್ಥೆಯಲ್ಲಿ ಜನರ ಪ್ರಯಾಣ ಮತ್ತು ಸಾರಿಗೆ ಅಗತ್ಯಗಳನ್ನು ಪೂರೈಸುವ ROW ಅಪ್ಲಿಕೇಶನ್, ನೋಂದಾಯಿತ ಮತ್ತು ಪರಿಶೀಲಿಸಿದ ಚಾಲಕರು ಮತ್ತು ವಾಹನ ಮಾಲೀಕರು ಮಾತ್ರ ಶಾಂತಿಯುತ ಅನುಭವವನ್ನು ಖಚಿತಪಡಿಸಿಕೊಳ್ಳಲು ಸಂಪರ್ಕದಲ್ಲಿರುವುದನ್ನು ಖಚಿತಪಡಿಸುತ್ತದೆ.

"ನಮ್ಮ ಧ್ಯೇಯ ಅತ್ಯುತ್ತಮ ಪ್ರಯಾಣ ಮತ್ತು ಸಾರಿಗೆ ಅಪ್ಲಿಕೇಶನ್ ಅನ್ನು ಒದಗಿಸುವುದು ಮತ್ತು ಗ್ರಾಹಕರಿಗೆ ಅತ್ಯಂತ ಸ್ಮರಣೀಯ ಸೇವಾ ಅನುಭವವನ್ನು ನೀಡುವುದು. ಏತನ್ಮಧ್ಯೆ, ಸೇವಾ ಸಂಗ್ರಾಹಕರು ಪ್ರಸ್ತುತ ಗ್ರಾಹಕರಿಗೆ ವಿಧಿಸುವ ೩೦-೪೦% ಕಮಿಷನ್ ಅನ್ನು ತೆಗೆದುಹಾಕುವ ಮೂಲಕ ಗ್ರಾಹಕರು ಮತ್ತು ವಾಹನ ಮಾಲೀಕರು, ಚಾಲಕರು ಇಬ್ಬರಿಗೂ ಗೆಲುವು-ಗೆಲುವಿನ ಪರಿಸ್ಥಿತಿಯನ್ನು ಸೃಷ್ಟಿಸಲು ನಾವು ಬಯಸುತ್ತೇವೆ" ಎಂದು ROW ನ ಸಂಸ್ಥಾಪಕರು ಹಾಗೂ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ರವಿಮಲ್ಲಯ್ಯ ಹೇಳಿದರು. ಶ್ರೀ ರವಿಮಲ್ಲಯ್ಯನವರು ಈ ಆಪ್ ಮೂಲಕ ಕನ್ನಡಿಗರಿಗೆ ಒಳಿತಾಗುವ ಕೆಲಸ ಮಾಡುತ್ತಿದ್ದಾರೆ. ಇವರ ಸಮಾಜಮುಖಿ ಕೆಲಸದಿಂದ ಸಾಕಷ್ಟು ಉದ್ಯೋಗಾವಕಾಶ ಸೃಷ್ಟಿಯಾಗಿದೆ. ಒಬ್ಬ ಕನ್ನಡಿಗನಾಗಿದ್ದು ಕನ್ನಡಿಗರಿಗಾಗಿ ದಿಟ್ಟ ಹೆಜ್ಜೆಯನ್ನು ತೆಗೆದುಕೊಂಡಿರುವ ಶ್ರೀ ರವಿಮಲ್ಲಯ್ಯನವರಿಗೆ ಸಂಸ್ಥೆಯ ಸಹಸಂಸ್ಥಾಪಕರಾದ ಶ್ರೀ ಕಾರ್ತಿಕ್ ಅವರು ಸಾಥ್ ನೀಡಿದ್ದಾರೆ.

ಆಶೀರ್ವಚನ ನೀಡಿದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು "ಇದೊಂದು ಕನ್ನಡಿಗರೇ ಕನ್ನಡಿಗರಿಗಾಗಿ ಪ್ರಾರಂಭಿಸಿದ ವಿನೂತನ ಸೇವೆ. ಈ ಸೇವೆಯನ್ನು ಜನರು ಸದುಪಯೋಗಪಡಿಸಿಕೊಳ್ಳಬೇಕಾಗಿ ಬಿನ್ನಹ ಮಾಡಿಕೊಳ್ಳುತ್ತೇವೆ. ಹಾಗೂ ಸಂಸ್ಥೆಯ ಸಂಸ್ಥಾಪಕರಾದ ಶ್ರೀ ರವಿಮಲ್ಲಯ್ಯ ಮತ್ತು ತಂಡಕ್ಕೆ ಈ ಕಾರ್ಯಕ್ಕೆ ಶುಭಕೋರುತ್ತೇವೆ" ಎಂದು ಹೇಳಿದರು.

"ಧ್ರುವ ಸರ್ಜಾ ಈ ಒಂದು ಸೇವೆಗೆ ಅತ್ಯಂತ ಸೂಕ್ತ ಬ್ರಾಂಡ್ ಅಂಬಾಸಿಡರ್. ಏಕೆಂದರೆ, ಅವರ ಹೆಸರಲ್ಲೇ ಗೆಲುವಿದೆ.

ಅಷ್ಟೇ ಅಲ್ಲದೆ ಧ್ರುವ ಮತ್ತು ಅವರ ಕುಟುಂಬ ಆಂಜನೇಯನ ಪರಮಭಕ್ತರು. ಆಂಜನೇಯನ ಆಶೀರ್ವಾದ ಸದಾ ಈ ಸಂಸ್ಥೆಯ ಮೇಲಿರುತ್ತೆ. ಸಂಸ್ಥೆಯ ಸಂಸ್ಥಾಪಕರಾದ ಶ್ರೀ ರವಿಮಲ್ಲಯ್ಯ ಕನ್ನಡಿಗರಿಗೆ ಒಳಿತಾಗುವ ಕೆಲಸವನ್ನು ಮಾಡಿದ್ದಾರೆ. ಇದರಿಂದ ಸಾಕಷ್ಟು ಉದ್ಯೋಗಾವಾಕಾಶ ಸೃಷ್ಟಿಯಾಗಲಿದೆ. ಆದ್ದರಿಂದ ಅವರಿಗೂ ಅವರ ತಂಡಕ್ಕೂ ಒಳಿತಾಗಬೇಕು" ಎಂದು ವಿನಯ್ ಗುರೂಜಿಯವರು 'ರೋ' ಆಪ್‌ನ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದರು.

ಕಾರ್ಯಕ್ರಮದಲ್ಲಿ ಭಾಗವಹಿಸಿದ್ದ ಹಿರಿಯ ರಾಜಕಾರಣಿ, ಕಾನೂನು ಮತ್ತು ಸಂಸದೀಯ ಹಾಗೂ ಸಣ್ಣ ನೀರಾವರಿ ಸಚಿವರಾದ ಶ್ರೀ ಜೆ.ಸಿ.ಮಾಧುಸ್ವಾಮಿ "ಈ ಆಪ್ ಕನ್ನಡಿಗರಿಗೆ ಹೆಚ್ಚು ಅನಕೂಲ ನೀಡಲಿದೆ. ಶ್ರೀ ರವಿಮಲ್ಲಯ್ಯ ಒಬ್ಬ ಸಾಹಸಿಗ. ಅವರಿಂದ ಇನ್ನಷ್ಟು ಇಂತಹ ಕೆಲಸಗಳು ಆಗಲಿ" ಎಂದು ಶುಭ ಹಾರೈಸಿದರು.

ಇನ್ನು ಬ್ರಾಂಡ್ ಅಂಬಾಸಿಡರ್ ಆಗಿರುವ ಧ್ರುವ ಸರ್ಜಾ ಮಾತನಾಡಿ "ಇದೊಂದು ಕನ್ನಡಿಗರು, ಕನ್ನಡಿಗರಿಗಾಗಿ ಸೃಷ್ಟಿಸಿದ ಅದ್ಭುತ ಅವಕಾಶ ಮತ್ತು ಚಾಲಕರ ಹಿತದೃಷ್ಟಿಯಿಂದ ಇದೊಂದು ಅದ್ಭುತ ಬೆಳವಣಿಗೆ ಎಂಬ ಕಾರಣಕ್ಕೆ ಯಾವುದೇ ನಿರೀಕ್ಷೆಯಿಲ್ಲದೆ ಬ್ರಾಂಡ್ ಅಂಬಾಸಿಡರ್ ಆಗಿರೋದು ವಿಶೇಷ." ಸಂಸ್ಥೆಯ ಸಹಸಂಸ್ಥಾಪಕರಾದ ಶ್ರೀ ಕಾರ್ತಿಕ್ ಮಾತನಾಡಿ "ಈ ಡಿಜಿಟಲ್ ಯುಗದಲ್ಲಿ, 'ರೋ' ಆಪ್ ಅತ್ಯಂತ ಗ್ರಾಹಕಸ್ನೇಹಿ ಸೇವೆಯನ್ನು ಕಲ್ಪಿಸಲಿದೆ. ಈ ಒಂದು ಆಪ್ ಮೂಲಕ ROW – ಹೊರವಲಯದ ಕಾರುಗಳು, ಪ್ರಯಾಣಿಕ ಮತ್ತು ಸರಕುಗಳ ವಾಹನಗಳು, ಪ್ರೈಮ್ ಕಾರುಗಳು, ಸ್ವಯಂ ಡ್ರೈವ್, ಬಿಡಿ ಚಾಲಕ, ಐಶಾರಾಮಿ ಕಾರುಗಳನ್ನೂ ಒದಗಿಸುವುದು ಸೇರಿದಂತೆ ವಿವಿಧ ಸೇವೆಗಳನ್ನು ಒದಗಿಸುತ್ತದೆ ಮತ್ತು ಕಾರುಗಳನ್ನು ಒದಗಿಸುತ್ತದೆ ಮತ್ತು ಸಾಮಾಜಿಕ ಮಾಧ್ಯಮ ಡ್ಯಾಶ್ಬರ್ಡ್ ಹೊಂದಿದೆ' ಎಂದು ಹೇಳಿದರು.

ಕನ್ನಡಿಗರಿಂದ ಆರಂಭವಾಗಿರುವ ರೆಡಿ ಆನ್ ವೀಲ್ಸ್ (ROW) ಅಪ್ ಒಂದೇ ಸೂರಿನಡಿ ಹಲವು ಗ್ರಾಹಕಸ್ನೇಹಿ ಸೇವೆಗಳನ್ನು ನೀಡಲಿದ್ದು, ಈ ಸೇವೆ ಮುಂದಿನ ದಿನಗಳಲ್ಲಿ ದೇಶಾದ್ಯಂತ ವಿಸ್ತರಿಸಲಿದೆ. ಇದು ಕನ್ನಡಿಗರ ಪಾಲಿಗೆ ಹೆಮ್ಮೆಯ ಸಂಗತಿ.



ಗುಂಡ್ಲು ಪೇಟೆ ತಾಲ್ಲೂಕಿನ ಪಡಗೂರು ಅಡವಿಮಠದ ಪರಮಪೂಜ್ಯ ಶ್ರೀ ಶ್ರೀ ಶಿವಲಿಂಗೇಂದ್ರ ಸ್ವಾಮಿಗಳವರು, ಮಂಡ್ಯ ಜಿಲ್ಲೆ, ಮಳವಳ್ಳಿ ತಾಲ್ಲೂಕಿನ ಹಂಗ್ರಾಪುರ ಮಠದ ಪೂಜ್ಯ ಶ್ರೀ ಬಸವಲಿಂಗ ಸ್ವಾಮಿಗಳವರು, ಚಾಮರಾಜನಗರ ಜಿಲ್ಲೆಯ ಗುಂಡ್ಲುಪೇಟೆ ತಾಲ್ಲೂಕಿನ ಕಬ್ಬಳ್ಳಿಮಠದ ಪೂಜ್ಯ ಶ್ರೀ ಗುರುಸಿದ್ಧ ಸ್ವಾಮಿಗಳವರು ಸಿದ್ಧಗಂಗಾ ಮಠಕ್ಕೆ ಆಗಮಿಸಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರನ್ನು ಕಾರ್ಯಕ್ರಮಕ್ಕೆ ಆಹ್ವಾನಿಸಿ ತಮ್ಮ ಪಡಗೂರಿನ ಗ್ರಾಮಸ್ಥರೊಂದಿಗೆ ಆಶೀರ್ವಾದ ಪಡೆದರು



ವರದಿ

# ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ತುಮಕೂರಿನಲ್ಲಿ ಕನ್ನಡ ರಾಜ್ಯೋತ್ಸವ ಆಚರಣೆ



ನವೆಂಬರ್ ೨೯ ರಂದು, ತುಮಕೂರು ಮಾರುತಿನಗರದ ನಾಗರಿಕರ ಸಮಿತಿ ಏರ್ಪಡಿಸಿದ್ದ ಕನ್ನಡ ರಾಜ್ಯೋತ್ಸವ ಸಮಾರಂಭವನ್ನು ಜ್ಯೋತಿ ಬೆಳಗಿಸಿ ಉದ್ಘಾಟಿಸಿದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ತಮ್ಮ ಆಶೀರ್ವಚನದಲ್ಲಿ "ನಾವು ನವೆಂಬರ್ ತಿಂಗಳ ಕನ್ನಡಿಗರಾಗದೆ ವರ್ಷವಿಡೀ ಕನ್ನಡಿಗರಾಗಬೇಕು. ಪ್ರತಿಯೊಬ್ಬರಲ್ಲೂ ಕನ್ನಡಾಭಿಮಾನ ಮೂಡಬೇಕು. ೧೯೫೬ ರಲ್ಲಿ ಭಾಷಾವಾರು ಪ್ರಾಂತ್ಯ ರಚನೆಯಾದಾಗ ಹರಿದು ಹಂಚಿ ಹೋಗಿದ್ದ ಕರುನಾಡು ಕನ್ನಡಭಾಷೆಯ ಆಧಾರದಲ್ಲಿ ಒಟ್ಟುಗೂಡಿ ಮೈಸೂರು ರಾಜ್ಯವಾಗಿ ಉದಯವಾಯಿತು. ನಂತರ ಕರ್ನಾಟಕವೆಂದು ಹೆಸರಾಯಿತು. ಪ್ರತಿವರ್ಷ ನವೆಂಬರ್‌ನಲ್ಲಿ ಮಾತ್ರ ನಮ್ಮಲ್ಲಿ ಕನ್ನಡ ಪ್ರೀತಿ ಹುಟ್ಟುತ್ತದೆ. ಹಾಗಾಗಲು ನಾವು ಬಿಡಬಾರದು. ಪರರಾಜ್ಯದವರು ನಮ್ಮಲ್ಲಿ ಬಂದಾಗ ಅವರ ಭಾಷೆಯಲ್ಲೇ ಉತ್ತರಿಸುವಷ್ಟು ಉದಾರತ್ವ ಕನ್ನಡಿಗರಲ್ಲಿರುವುದರಿಂದಲೇ ಕನ್ನಡಕ್ಕೆ ಆಪತ್ತು ಒದಗುತ್ತಿದೆ" ಎಂದು ಎಚ್ಚರಿಸಿದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಪ್ರಜಾಪ್ರಗತಿ ಪತ್ರಿಕೆಯ ಸಂಪಾದಕರಾದ ಶ್ರೀ ಎಸ್. ನಾಗಣ್ಣ ಅವರು ಮಾತನಾಡಿ "ಮೂಲಭೂತವಾಗಿ ಭಾಷಾಜ್ಞಾನ ಅಲ್ಲದೆ ಹದಗೆಟ್ಟು ನುಡಿಗಟ್ಟು ರಚಿಸಲು ಸಾಧ್ಯವಿಲ್ಲ. ಭಾವನೆಯೇ ಇಲ್ಲದೆ ಭಾಷೆ, ಜ್ಞಾನ ವೃದ್ಧಿಸಲು ಸಾಧ್ಯವಿಲ್ಲ. ಟಿ.ವಿ. ಸೀರಿಯಲ್, ಮೊಬೈಲ್‌ಗಳಿಗೆ ಬಿದ್ದು ಕನ್ನಡ ಪುಸ್ತಕ, ಪತ್ರಿಕೆ ಓದುವವರ ಸಂಖ್ಯೆ ಕ್ಷೀಣಿಸುತ್ತಿದೆ. ಮುಂದಿನ ಪೀಳಿಗೆಗೆ ಕನ್ನಡ ಓದುವುದನ್ನು, ಬರೆಯುವುದನ್ನು ಕಲಿಸದೆ ಹೋದರೆ ದೊಡ್ಡಬೆಲೆ ತೆರಬೇಕಾಗುತ್ತದೆ" ಎಂದು ಹೇಳಿದರು.

ಸಮಾರಂಭದಲ್ಲಿ ಭಾಗವಹಿಸಿದ್ದ ತುಮಕೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷರಾದ ಶ್ರೀ ಕೆ.ಎಸ್. ಸಿದ್ಧಲಿಂಗಪ್ಪ ಅವರು ಮಾತನಾಡಿ "ನಾಡು ನುಡಿ ವಿಚಾರ ಬಂದಾಗ ಎಲ್ಲ ಕನ್ನಡಿಗರು ಒಂದಾಗಿ ಕೈಜೋಡಿಸಬೇಕು. ಕರ್ನಾಟಕ ಏಕೀಕರಣಕ್ಕೆ ದುಡಿದವರಲ್ಲಿ ತುಮಕೂರಿನವರೇ ಆದ ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರೀಗಳು ಸಲ್ಲಿಸಿದ ಸೇವೆ ಸ್ಮರಣೀಯ. ನಾಡಿನ ಏಕೀಕರಣ ಭಾಷೆಯಿಂದ ಮಾತ್ರ ಆಗಬಾರದು. ಭಾವ ಬಾಂಧ್ಯವದಿಂದ ಆಗಬೇಕು" ಎಂದು ಹೇಳಿದರು.

ಮಾಜಿ ಶಾಸಕ ಡಾ. ರಫೀಕ್ ಅಹಮದ್ ಅವರು ಮಾತನಾಡಿ "ಕನ್ನಡ ನಾಡು ನುಡಿಗೆ ಧಕ್ಕೆ ಬಂದಾಗ ಕನ್ನಡ ಪರ ಸಂಘಟನೆಗಳು ಮುಂದೆ ಬಂದು ಹೋರಾಟಗಳನ್ನು ಮಾಡಿ ನಾಡು ನುಡಿಗೆ ಸೇವೆ ಸಲ್ಲಿಸುತ್ತಿರುವುದು ಅಭಿನಂದನಾರ್ಹ.

ಮಹಾರಾಷ್ಟ್ರ ಗಡಿ ವಿಷಯದಲ್ಲಿ ನಾವು ಒಗ್ಗಟ್ಟನ್ನು ಪ್ರದರ್ಶಿಸಿದರೆ ಯಾವುದೇ ಸಮಸ್ಯೆಯಾಗದು" ಎಂದರು.

ವಿದ್ಯಾನಿಕೇತನ ವಿದ್ಯಾಸಂಸ್ಥೆ ಕಾರ್ಯದರ್ಶಿ ಡಾ. ಜಯರಾವ್‌ರಾವ್ ಮಾತನಾಡಿ "ತಿಂಗಳಿಗೊಮ್ಮೆ ಶಾಲೆಗಳಲ್ಲಿ ಮಹಿಳಾ ಬಳಗದಲ್ಲಿ ಕನ್ನಡ ಕಾರ್ಯಕ್ರಮ ಮಾಡಿ ನಂತರ ನವೆಂಬರ್‌ನಲ್ಲಿ ಆ ವರ್ಷದ ಕನ್ನಡ ರಾಜ್ಯೋತ್ಸವ ಮಾಡಬೇಕು. ಮಕ್ಕಳಿಗೆ ಕನ್ನಡ ಸಿರಿವಂತಿಕೆ, ಸಂಸ್ಕೃತಿ ಪರಿಚಯಿಸುವ ಕಾರ್ಯ ಆಗಬೇಕಾಗಿದೆ" ಎಂದು ಹೇಳಿದರು.

ಸಮಾರಂಭದ ಸಾನ್ನಿಧ್ಯವನ್ನು ಕೊಡಗಿನ ಕಲ್ಮಠದ ಪೂಜ್ಯ ಶ್ರೀ ಶ್ರೀ ಮಹಾಂತೇಶ ಸ್ವಾಮಿಗಳವರು ವಹಿಸಿದ್ದರು. ನಾಗರಿಕರ ಸಮಿತಿ ಅಧ್ಯಕ್ಷ ಶ್ರೀ ಜಗಜ್ಯೋತಿ ಸಿದ್ಧರಾಮಯ್ಯ ಅವರು ಅಧ್ಯಕ್ಷತೆ ವಹಿಸಿದ್ದರು. ಗೌರವಾಧ್ಯಕ್ಷ ಶ್ರೀ ಎನ್. ಹನುಮಂತಪ್ಪ, ಎಸ್. ಮಹಾದೇವಯ್ಯ, ರಾಮಚಂದ್ರಯ್ಯ, ಗಂಗಯ್ಯ, ಚಿಕ್ಕನರಸಯ್ಯ, ಚನ್ನಿಗರಾಯಪ್ಪ, ಸಿದ್ಧಗಂಗಯ್ಯ, ಡಾ. ಅಂಜನ್‌ಕುಮಾರ್ ವಾಲ್ಮೀಕಿ, ಜೆ.ಎಂ. ಸುರೇಶ್, ಲಕ್ಷ್ಮೀ ಐಯ್ಯಂಗಾರ್ ಸೇರಿದಂತೆ ಸಮಿತಿಯ ಪದಾಧಿಕಾರಿಗಳು ಉಪಸ್ಥಿತರಿದ್ದರು.

## ಶ್ರೀ ಸಿದ್ಧಗಂಗಾ ತಾಂತ್ರಿಕ ಕಾಲೇಜಿನಲ್ಲಿ ಮೊದಲನೆ ವರ್ಷದ ತರಗತಿಗಳ ಉದ್ಘಾಟನೆ



ಶ್ರೀ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದಲ್ಲಿ ಮೊದಲ ವರ್ಷದ ತರಗತಿಗಳನ್ನು ಪರಮ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಡಿಸೆಂಬರ್ ೧ ರಂದು, ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಅವರು ತಮ್ಮ ಮಂಗಳ ನುಡಿಗಳಲ್ಲಿ "ಪೋಷಕರು ತಮ್ಮ ಮಕ್ಕಳನ್ನು ಸಾಮಾನ್ಯ ಪ್ರಜೆಗಳಂತೆ ಬೆಳೆಸಬೇಕು. ಹಾಗಾದಾಗ ಮಾತ್ರ ಮಕ್ಕಳಿಗೆ ಪ್ರಸ್ತುತ ಸಮಾಜದ ಇತರ ಮೌಲ್ಯಗಳು ತಿಳಿಯುತ್ತದೆ. ಹಾಗೆ ಮಾಲ್ಯಗಳನ್ನು ಅಳವಡಿಸಿಕೊಳ್ಳುವುದರಿಂದ ವಿದ್ಯಾರ್ಥಿಗಳು ಮುಂದಿನ ದಿನಗಳಲ್ಲಿ ನಡೆಯುವಂತಹ ಬದಲಾವಣೆಗಳನ್ನು ಅರಿತು ಅದರಂತೆ ಹೊಂದಿಕೊಂಡು ಜೀವನ ಸಾಗಿಸಬೇಕು. ಮಕ್ಕಳಿಗೆ ಸಂವಹನ ಕೌಶಲ್ಯಗಳನ್ನು ಬಳಸುವುದರ ಮೂಲಕ ಮತ್ತು ಕೌಶಲ್ಯಾಭಿವೃದ್ಧಿ ಕಾರ್ಯಕ್ರಮಗಳನ್ನು ಹೆಚ್ಚು ಹೆಚ್ಚು ಮಾಡುವುದರಿಂದ ಅವರಲ್ಲಿ ಆತ್ಮವಿಶ್ವಾಸ ಹೆಚ್ಚಾಗುತ್ತದೆ. ವ್ಯಕ್ತಿಯ ಅಭಿವೃದ್ಧಿಯಾಗಲು ಮಕ್ಕಳು ಉತ್ತಮ ಗುಣಮಟ್ಟದ ಪುಸ್ತಕಗಳನ್ನು ಹೆಚ್ಚು ಹೆಚ್ಚು ಓದುವುದರಿಂದ ಅವರಲ್ಲಿ ಮಾನಸಿಕ ಸಾಮರ್ಥ್ಯ ಹೆಚ್ಚಾಗುತ್ತದೆ ಎಂದರಲ್ಲದೆ ವಿದ್ಯಾರ್ಥಿಗಳು ಶ್ರಮಪಟ್ಟು ವಿದ್ಯಾಭ್ಯಾಸ ಮಾಡಿದರೆ ಮುಂದೆ ಒಳ್ಳೆಯ ಭವಿಷ್ಯವನ್ನು ಕಾಣಲು ಸಾಧ್ಯ" ಎಂದು ಹೇಳಿದರು.

ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ಶ್ರೀ ಶ್ರೀರಾಮ ಗೋಪಾಲಸ್ವಾಮಿ ಅವರು ತಮ್ಮ ಭಾಷಣದಲ್ಲಿ ಪೋಷಕರು ಹೇಗೆ ತಮ್ಮ ಮಕ್ಕಳನ್ನು ಬೆಳೆಸಬೇಕು ಎಂಬುದರ ಬಗ್ಗೆ ಅರಿವು ಮೂಡಿಸಿದರು.

ಕಾರ್ಯಕ್ರಮದಲ್ಲಿ ಸಿದ್ಧಗಂಗಾ ವಿದ್ಯಾ ಸಂಸ್ಥೆಯ ಕಾರ್ಯದರ್ಶಿ ಶ್ರೀ ಟಿ.ಕೆ. ನಂಜುಂಡಪ್ಪ, ನಿರ್ದೇಶಕರಾದ ಡಾ. ಎಂ.ಎನ್. ಚನ್ನಬಸಪ್ಪ, ಸಿಇಓ ಡಾ. ಶಿವಕುಮಾರಯ್ಯ, ಪ್ರಾಂಶುಪಾಲರಾದ ಪ್ರೊ. ಎಸ್.ವಿ. ದಿನೇಶ್ ಹಾಗೂ ವಿವಿಧ ವಿಭಾಗಗಳ ಮುಖ್ಯಸ್ಥರು ಉಪಸ್ಥಿತರಿದ್ದರು.



ಕ್ಷೇತ್ರವಾರ್ತೆ

# ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಶ್ರೀಮಠದಲ್ಲಿ ನಡೆದ ಗುರುಕಿರಣ ಕೇಂದ್ರದ ೫ನೇ ವಾರ್ಷಿಕೋತ್ಸವ

ವಿದ್ಯಾರ್ಥಿಗಳ ಶೈಕ್ಷಣಿಕ ಪ್ರಗತಿಗೆ ಪೂರಕವಾಗುವಂತೆ ಮಾಡುವ ಉದ್ದೇಶದಿಂದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದೂರದೃಷ್ಟಿಯಿಂದ ಸೆಪ್ಟೆಂಬರ್ ೧೯, ೨೦೧೭ ರಲ್ಲಿ ಪ್ರಾರಂಭವಾದ 'ಗುರುಕಿರಣ' ಕೇಂದ್ರವು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ಮಾರ್ಗದರ್ಶನದಲ್ಲಿ ಮುನ್ನಡೆಯುತ್ತಿದೆ.

**ಕೇಂದ್ರದ ಉದ್ದೇಶಗಳು :**

೧. ಶ್ರೀಮಠದ ಸನಿವಾಸ ವಿದ್ಯಾ ಸಂಸ್ಥೆಗಳಲ್ಲಿ ೯ನೇ ತರಗತಿಯಲ್ಲಿ ಅಧ್ಯಯನ ಮಾಡುತ್ತಿರುವ ಆಸಕ್ತ ವಿದ್ಯಾರ್ಥಿಗಳಿಗೆ ಅರ್ಹತಾ ಪರೀಕ್ಷೆಯ ಮೂಲಕ ಪ್ರತಿವರ್ಷ ೩೫-೪೦ ವಿದ್ಯಾರ್ಥಿಗಳನ್ನು ಆಯ್ಕೆ ಮಾಡಿ ಅವರಿಗೆ ನಿರಂತರ ಆರು-ಏಳು ವರ್ಷಗಳ ಕಾಲ ಶೈಕ್ಷಣಿಕ, ವೃತ್ತಿ ಹಾಗೂ ಸ್ಪರ್ಧಾತ್ಮಕ ಪರೀಕ್ಷಾ ಮಾರ್ಗದರ್ಶನ ನೀಡುವುದು.

೨. ಸ್ಪರ್ಧಾತ್ಮಕ ಪರೀಕ್ಷೆಗಳ ಬಗ್ಗೆ ಅರಿವು, ಆಸಕ್ತಿ ಮೂಡಿಸುವುದು.

೩. ವಿದ್ಯಾರ್ಥಿಗಳು ಪದವಿ ಪರೀಕ್ಷೆ ಮುಗಿಸುವುದರೊಳಗಾಗಿ ರಾಜ್ಯ ಹಾಗೂ ರಾಷ್ಟ್ರಮಟ್ಟದ ನಾಗರಿಕ ಸೇವಾ ಸ್ಪರ್ಧಾತ್ಮಕ ಪರೀಕ್ಷೆಗಳನ್ನು ಸಮರ್ಥವಾಗಿ ಎದುರಿಸುವ ಆತ್ಮಸ್ಥೈರ್ಯ, ಸಾಮರ್ಥ್ಯವನ್ನು ಗಳಿಸಿಕೊಳ್ಳುವಂತೆ ಮಾಡುವುದು.

೪. ಕಾಲಕಾಲಕ್ಕೆ ವಿದ್ಯಾರ್ಥಿಗಳ ಬೌದ್ಧಿಕ ಬೆಳವಣಿಗೆಗೆ ಪೂರಕವಾಗುವಂತಹ ವ್ಯಕ್ತಿತ್ವ ವಿಕಸನ ಕಾರ್ಯಕ್ರಮಗಳನ್ನು ನಡೆಸುವುದು.

**ಕೇಂದ್ರದಿಂದ ದೊರೆಯುವ ಸೌಲಭ್ಯಗಳು**

ಸುಸಜ್ಜಿತವಾದ ಗ್ರಂಥಾಲಯ, ವಾಚನಾಲಯ, ನಿರಂತರ ನೆಟ್ ಸಂಪರ್ಕವುಳ್ಳ ಕಂಪ್ಯೂಟರ್ ಬ್ರೌಸಿಂಗ್ ಕೇಂದ್ರ, ಲ್ಯಾಪ್‌ಟಾಪ್, ಪ್ರೊಜೆಕ್ಟರ್‌ವುಳ್ಳ ಎರಡು ಉಪನ್ಯಾಸ ಕೊಠಡಿಗಳು ಹಾಗೂ ಒಂದು ಸೆಮಿನಾರ್ ಸಭಾಂಗಣವನ್ನು ಒಳಗೊಂಡಿದ್ದು, ಇದನ್ನು ಶ್ರೀಮಠದ ಹಳೆಯ ವಿದ್ಯಾರ್ಥಿಗಳು ನಿರ್ವಹಿಸುತ್ತಿದ್ದಾರೆ. ಈ ಕೇಂದ್ರಕ್ಕೆ ಆಯ್ಕೆಯಾದ ವಿದ್ಯಾರ್ಥಿಗಳಿಗೆ ಪ್ರತ್ಯೇಕ ವಸತಿ ಮತ್ತು ಮೇಲ್ವಿಚಾರಣಾ ವ್ಯವಸ್ಥೆ ಇದೆ.

ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡಲು ಶ್ರೀಮಠ ವಿದ್ಯಾ ಸಂಸ್ಥೆಗಳಲ್ಲಿ ಹಾಗೂ ಸರ್ಕಾರಿ ಶಾಲೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಪ್ರತಿಭಾನ್ವಿತ ಶಿಕ್ಷಕರು ಹಾಗೂ ವಿವಿಧ ಇಲಾಖೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ಅಧಿಕಾರಿಗಳು ಸ್ವಯಂ ಪ್ರೇರಿತರಾಗಿ ರಜಾದಿನಗಳಲ್ಲಿ, ದಸರಾ, ಬೇಸಿಗೆ ರಜಾ ದಿನಗಳಲ್ಲಿ ಬಂದು ಮಾರ್ಗದರ್ಶನ ಮಾಡುತ್ತಿದ್ದಾರೆ.

ನವೆಂಬರ್ ೨೭ ರಂದು, ಕೇಂದ್ರದ ೫ನೇ ವಾರ್ಷಿಕೋತ್ಸವ ಸಮಾರಂಭ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ನಡೆಯಿತು. ಅಧ್ಯಕ್ಷತೆಯನ್ನು ಶ್ರೀ ಸಿದ್ಧಗಂಗಾ ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ಟಿ.ಕೆ. ನಂಜುಂಡಪ್ಪ ಅವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ವೆಂಕಟೇಶ್ ನಾಯಕ, ಶ್ರೀ ಹೆಚ್. ರಾಜಕುಮಾರ್, ತುಮಕೂರು ಜಿಲ್ಲಾ ಪಂಚಾಯತಿ ಮುಖ್ಯ ಲೆಕ್ಕಾಧಿಕಾರಿ, ಶ್ರೀ ನರಸಿಂಹಮೂರ್ತಿ, ಶ್ರೀ ನರಸಪ್ಪ, ವಾಣಿಜ್ಯ ತೆರಿಗೆ ಅಧಿಕಾರಿ ಶ್ರೀ ಬಸವರಾಜು ಅವರು ಭಾಗವಹಿಸಿದ್ದರು.



ಇದೇ ಸಂದರ್ಭದಲ್ಲಿ ಕಳೆದ ಐದು ವರ್ಷಗಳಿಂದ ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ಸರ್ಕಾರದ ವಿವಿಧ ಹುದ್ದೆಗಳಿಗೆ ಆಯ್ಕೆಯಾದ ೧೫ ಜನ ಶ್ರೀಮಠದ ಹಳೆಯ ವಿದ್ಯಾರ್ಥಿಗಳನ್ನು ಗೌರವಿಸಲಾಯಿತು. ಇವರ ಜೊತೆಗೆ ಈ ಕ್ಷೇತ್ರವನ್ನು ಸುವ್ಯವಸ್ಥೆಯಾಗಿ ನಿರ್ವಹಿಸಲು ಆರ್ಥಿಕ ನೆರವು ನೀಡುತ್ತಿರುವ ಹಾಗೂ ಕೇಂದ್ರಕ್ಕೆ ಅಗತ್ಯವಾದ ಪರಿಕರಗಳನ್ನು ಕೊಡುಗೆಯಾಗಿ ನೀಡಿದ ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳನ್ನು, ಸ್ವಯಂ ಸೇವಕ ಶಿಕ್ಷಕರು, ಮಾರ್ಗದರ್ಶಕರುಗಳನ್ನು ಗೌರವಿಸಲಾಯಿತು.

ವರದಿ : ಎಸ್.ಪಿ. ಸಿದ್ಧಲಿಂಗಸ್ವಾಮಿ, ಕೆಇಎಸ್
ಮುಖ್ಯ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ
ಹನುಮಂತಪುರ, ತುಮಕೂರು

## ಶ್ರೀವಾಣಿ

- ವಿದ್ಯಾರ್ಥಿಗಳು ಬೆಳಿಗ್ಗೆ ಎದ್ದರೆ ಮುಷ್ಕರ ಹೂಡಿ ಕಿಟಕಿ ಮುರಿದು, ಗಾಜನ್ನೊಡೆದು ನಿತ್ಯದ ಸಾಮಾನ್ಯ ವ್ಯವಹಾರಕ್ಕೆ ಧಕ್ಕೆ ತಂದು ಸಾರ್ವಜನಿಕ ವ್ಯವಹಾರಕ್ಕೆ ಧಕ್ಕೆ ತಂದು ಸಾರ್ವಜನಿಕ ಆಸ್ತಿಪಾಸ್ತಿಗೆ ಜಖಂ ಮಾಡುವುದು ನಾಗರಿಕತೆಯ ಲಕ್ಷಣವಲ್ಲ. ಅನಕ್ಷರತೆ, ಅಜ್ಞಾನ, ಮೂಢನಂಬಿಕೆ ಇವುಗಳ ವಿರುದ್ಧ ಹೋರಾಟ ಮಾಡಿ ದೇಶದ ಭವಿಷ್ಯವನ್ನು ಉಜ್ವಲಗೊಳಿಸುವ ಕಾರ್ಯದಲ್ಲಿ ತೊಡಗಿದಾಗ ವಿದ್ಯಾರ್ಥಿ ಜೀವನಕ್ಕೆ ಬೆಲೆಬರುತ್ತದೆ.
- ಪಾಶ್ಚಾತ್ಯರು ಕಾಲದ ಮಹತ್ವ ತಿಳಿದು ಅದರ ರಹಸ್ಯವನ್ನು ಅರಿತು ಅದಕ್ಕೆ ಬೆಲೆಕೊಟ್ಟು ಪ್ರಗತಿ ಹೊಂದಿದರು. ಮಹಾತ್ಮರು, ದೊಡ್ಡವರು ಕಾಲದ ಮಹತ್ವ ತಿಳಿದು ದೊಡ್ಡವರಾದರು. ನಾವು ಅರಿಯದೆ ಹಿಂದೆ ಬಿದ್ದೆವು.
- ಆಕಾಶದಲ್ಲಿ ಪಕ್ಷಿಗಳಂತೆ ಹಾರಾಡುತ್ತೇವೆ. ನೀರಿನಲ್ಲಿ ಮೀನಿನಂತೆ ಈಜಾಡುತ್ತಿದ್ದೇವೆ. ಆದರೆ ಭೂಮಿಯಲ್ಲಿ ಮಾನವರಾಗಿ ಬಾಳುವುದೇ ಗೊತ್ತಿಲ್ಲದಂತಾಗಿದೆ.

"Siddaganga" Monthly - Postal Reg. No. L2/RNP/385/TMR/2021-23
Posted at RMS, Tumkur-572 102

RNI No. 17139/69



To

_______________

_______________

_______________

If undelivered please return to :
Editor
Siddaganga Monthly Magazine
Siddaganga Math
Tumkur-572 104

email ID : geetanjaligraphics@gmail.com